# ಚರಿತ್ರೆ ಲೇಖನಶಾಸ್ತ್ರ : ತುಮಕೂರು ಪ್ರದೇಶದ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್.ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕ
ಕೆ.ಎಸ್.ವಿಶ್ವನಾಥ್





ಮಾರ್ಗದರ್ಶಕರು
ಡಾ. ಕೆ.ಮೋಹನ್‌ಕೃಷ್ಣ ರೈ
ಮುಖ್ಯಸ್ಥರು, ಚರಿತ್ರೆ ವಿಭಾಗ








ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಜೂನ್ ೨೦೦೭

# ಚರಿತ್ರೆ ಲೇಖನಶಾಸ್ತ್ರ :
# ತುಮಕೂರು ಪ್ರದೇಶದ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್.ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕ

**ಕೆ.ಎಸ್.ವಿಶ್ವನಾಥ್**

ಮಾರ್ಗದರ್ಶಕರು

**ಡಾ. ಕೆ.ಮೋಹನ್‌ಕೃಷ್ಣ ರೈ**

ಮುಖ್ಯಸ್ಥರು, ಚರಿತ್ರೆ ವಿಭಾಗ









ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಜೂನ್ ೨೦೦೭

# ಮಾರ್ಗದರ್ಶಕರ ಪ್ರಮಾಣಪತ್ರ

ಚರಿತ್ರೆ ಲೇಖನಶಾಸ್ತ್ರ : ತುಮಕೂರು ಪ್ರದೇಶದ ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಕೆ.ಎಸ್.ವಿಶ್ವನಾಥ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಕೆ.ಮೋಹನ್‌ಕೃಷ್ಣ ರೈ
ಮಾರ್ಗದರ್ಶಕರು ಮತ್ತು ಮುಖ್ಯಸ್ಥರು
ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೮.೦೬.೦೨

# ಪ್ರಮಾಣ ಪತ್ರ

ಚರಿತ್ರೆ ಲೇಖನಶಾಸ್ತ್ರ : ತುಮಕೂರು ಪ್ರದೇಶದ ಅಧ್ಯಯನ ಎಂಬ ನಿಬಂಧವನ್ನು ಡಾ. ಕೆ.ಮೋಹನ್‌ಕೃಷ್ಣ ರೈ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

K.S. Viswanath
ಕೆ.ಎಸ್. ವಿಶ್ವನಾಥ್
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : ೨೮ - ೮ - ೨೦೦೭

# ಕೃತಜ್ಞತೆಗಳು

**ಚರಿತ್ರೆ ಲೇಖನಶಾಸ್ತ್ರ : ತುಮಕೂರು ಪ್ರದೇಶದ ಅಧ್ಯಯನ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಪದವಿಗಾಗಿ ಒಪ್ಪಿಸಲು ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ, ಮಾನ್ಯ ಕುಲಸಚಿವರಾದ ವಿ.ಶಂಕರ್ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ.ಟಿ.ಆರ್.ಚಂದ್ರಶೇಖರ್ ಅವರಿಗೆ,

ನಿಬಂಧ ವಿಷಯವನ್ನು ಸೂಚಿಸಿ ತಾಳ್ಮೆ ಮತ್ತು ಅಕ್ಕರೆಯಿಂದ ಸೂಕ್ತ ಸಲಹೆಗಳೊಂದಿಗೆ ಮಾರ್ಗದರ್ಶನ ನೀಡಿದ ಚರಿತ್ರೆ ವಿಭಾಗದ ಮುಖ್ಯಸ್ಥರು ಹಾಗೂ ಮಾರ್ಗದರ್ಶಕರೂ ಆದ ಡಾ.ಕೆ.ಮೋಹನ್‌ಕೃಷ್ಣ ರೈ ಅವರಿಗೆ,

ನನ್ನ ಅಧ್ಯಯನಕ್ಕೆ ಸ್ಫೂರ್ತಿ ಮತ್ತು ಸಲಹೆಗಳನ್ನು ನೀಡಿದ ಪ್ರೊ.ಲಕ್ಷ್ಮಣ್ ತೆಲಗಾವಿ, ಡಾ.ಟಿ.ಪಿ.ವಿಜಯ್ ಪೂಣಚ್ಚ, ಡಾ.ಎನ್.ಚಿನ್ನಸ್ವಾಮಿ ಸೋಸಲೆ, ಡಾ.ಸಿ.ಆರ್.ಗೋವಿಂದರಾಜು, ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರಿಗೆ,

ಈ ಅಧ್ಯಯನಕ್ಕೆ ಪ್ರೋತ್ಸಾಹ ಮತ್ತು ಸಲಹೆಗಳನ್ನು ನೀಡಿದ ಡಾ.ಷಡಕ್ಷರಯ್ಯ, ಡಾ.ಎಸ್.ಚಂದ್ರಶೇಖರ್, ಡಾ.ಅಶ್ವಥ ನಾರಾಯಣ, ಡಾ.ಎಂ.ಜಮುನ, ಡಾ.ಎಸ್.ನಾಗರತ್ನಮ್ಮ, ಡಾ.ಎನ್.ಷೇಕ್‌ಮಸ್ತಾನ್, ಡಾ.ಡಿ.ಎನ್.ಯೋಗೀಶ್ವರಪ್ಪ, ಡಾ.ಕೆ.ಎಲ್.ಎನ್.ಮೂರ್ತಿ, ಡಾ.ವೀರೇಶ ಬಡಿಗೇರ ಅವರಿಗೆ,

ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಎಚ್.ಬಿ.ಕುಮಾರಸ್ವಾಮಿ, ವನರಾಜಯ್ಯ, ಎಲ್.ನರಸಿಂಹಯ್ಯ ಅವರಿಗೆ,

ಅಧ್ಯಯನದ ಆರಂಭದಿಂದ ಅಂತ್ಯದವರೆಗೆ ಸೂಕ್ತ ಸಲಹೆ ಸೂಚನೆಗಳನ್ನು ನೀಡಿದ ಸ್ನೇಹಿತರಾದ ಡಿ.ಮಂಜುನಾಥ ಸ್ವಾಮಿ, ಎಲ್.ಶ್ರೀನಿವಾಸ, ಮಹಾಬಲೇಶ್, ಮಲ್ಲಿಕಾರ್ಜುನ, ಸಿ.ಜಿ.ಶಿವಕುಮಾರ, ಟಿ.ಎಂ.ಚಂದ್ರಶೇಖರ್, ಹೋಳಿಬಸಪ್ಪ, ವೀರೇಶ ಉತ್ತಂಗಿ, ಹಣಮಂತ್ರಾಯ ದೊಡ್ಡಮನಿ, ಡಿ.ಎಲ್.ದೇವರಾಜ್, ಎಚ್.ಎನ್.ಗಣೇಶ್ ಕುಮಾರ್, ಬಿ.ಎಸ್.ವಸಂತ ಕುಮಾರ್, ಕೆ.ಎಸ್.ಯೋಗಾನಂದ, ಉಮೇಶ್, ಮೋಹನ್, ಸುರೇಶ್, ಪರಮೇಶ್, ವಿಜಯಕುಮಾರ್ ಅವರಿಗೆ,

ಗ್ರಂಥಾಲಯದಿಂದ ಪುಸ್ತಕಗಳನ್ನು ಒದಗಿಸಿ ಕೊಟ್ಟ ಡಾ.ರಾಧಾಕೃಷ್ಣ, ಡಾ.ಎಚ್.ನಾಗವೇಣಿ, ಎಂ.ನಾಗಾರಾಜನಾಯಕ್, ಕೆ.ಗಣೇಶ್, ಶಿವ ಹಾಗೂ ಚರಿತ್ರೆ ವಿಭಾಗದ ಬೋಧಕೇತರ ಸಿಬ್ಬಂದಿಗಳಾದ ಸೋಮಶೇಖರ ಕಣವಿ, ವೀರೇಶ್, ಗಂಗಾಧರ ಅವರಿಗೆ,

ಸದಾ ಮಗನ ಏಳ್ಗೆಯನ್ನು ಬಯಸುವ ತಂದೆ ತಾಯಿಗಳಾದ ಶಿವಲಿಂಗಯ್ಯ, ಶಿವಲಿಂಗಮ್ಮ, ಸಹೋದರರಾದ ಕೆ.ಎಸ್.ನಟರಾಜು, ಕೆ.ಎಸ್.ಪ್ರಸನ್ನಕುಮಾರ್, ಕೆ.ಎಸ್.ರಾಜಶೇಖರ್, ಸಹೋದರಿಯರಾದ ಕೆ.ಎಸ್.ಇಂದಿರಾ, ಕೆ.ಎಸ್.ಮಂಜುಳಾ, ಮಾವಂದಿರಾದ ಬಿ.ರಾಜು, ಆರ್.ಎಂ.ರಾಜು, ಅತ್ತಿಗೆಯವರಾದ ಶಿವಕುಮಾರಿ, ಕಾತ್ಯಾಯಿಣಿ ಅವರಿಗೆ,

ಸದಾ ಅಳಿಯನ ಶ್ರೇಯಸ್ಸು ಬಯಸುವ ಮಾವ ಬಸವರಾಜು, ಅತ್ತೆ ಮಹಾದೇವಮ್ಮ, ಭಾಮೈದುನರಾದ ಸಿದ್ದಲಿಂಗಸ್ವಾಮಿ, ಶಶಿಧರ್, ಪ್ರಕಾಶ್, ಪ್ರದೀಪ್ ಹಾಗೂ ಅಂಬಿಕ ಸೋಮಸುಂದರ್ ಅವರಿಗೆ,

ನನ್ನ ಅಧ್ಯಯನಕ್ಕೆ ಸದಾ ಸ್ಫೂರ್ತಿ ಮತ್ತು ಪ್ರೋತ್ಸಾಹ ನೀಡಿದ ನನ್ನ ಪತ್ನಿ ಬಿ.ನಾಗರತ್ನ, ಮಗಳು ಕೆ.ವಿ.ದೀಕ್ಷಾ ಹಾಗೂ ಪುಟಾಣಿಗಳಾದ ನಿಸರ್ಗ, ಹಂಸ, ಬಿಂದು, ಮಣಿಕಂಠ, ರಕ್ಷಿತ್ ಅವರಿಗೆ,

ಅಕ್ಕರೆಯಿಂದ ಅಕ್ಷರ ಸಂಯೋಜನೆ ಮಾಡಿಕೊಟ್ಟ ಶ್ರೀಮತಿ ಬಿ.ರಶ್ಮಿ ಅವರಿಗೆ,

ಕೃತಜ್ಞತೆಗಳು

**ಕೆ.ಎಸ್. ವಿಶ್ವನಾಥ್**

# ಪರಿವಿಡಿ

ಪ್ರಸ್ತುತ ತುಮಕೂರು ಜಿಲ್ಲೆಯನ್ನು ಗುರುತಿಸಿರುವ ನಕ್ಷೆ




ಮೂಲ : ಜಯಮಂಗಲಿ, ೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ತುಮಕೂರು ೨೦೦೨ರ ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಸಮ್ಮೇಳನ, ಬೆಂಗಳೂರು, ಪು.೫

# ೧

# ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ

## ಪ್ರಸ್ತಾವನೆ

ಚರಿತ್ರೆ ಅಧ್ಯಯನದಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ಚರಿತ್ರೆ ರಚನೆಯನ್ನು ಕುರಿತು ಹಲವು ವಿದ್ವಾಂಸರುಗಳು ತಮ್ಮ ವಾದಗಳನ್ನು ಮಂಡಿಸಿದ್ದಾರೆ. ಚರಿತ್ರೆ ಅಧ್ಯಯನಕ್ಕೆ ಸಂಬಂಧಿಸಿದಂತೆ ಮೌಲ್ಯಯುತವಾದ ಚಿಂತನೆಗಳ ಮೂಲಕ ತಾತ್ವಿಕ ಚರ್ಚೆಗಳನ್ನು ನಡೆಸಿದವರಲ್ಲಿ ಆರ್.ಜಿ.ಕಾಲಿಂಗ್‌ವುಡ್ ಪ್ರಮುಖರು. ಅವರ 'ದಿ ಐಡಿಯಾ ಆಫ್ ಹಿಸ್ಟರಿ' ಕೃತಿಯು ಚರಿತ್ರೆ ರಚನಾಶಾಸ್ತ್ರಕ್ಕೆ ಸಂಬಂಧಿಸಿದಂತೆ ಪ್ರಮುಖವಾದುದ್ದಾಗಿದೆ. ಚರಿತ್ರೆಯ ತಾತ್ವಿಕತೆಯನ್ನು ಯಾವ ರೀತಿ ಅರ್ಥೈಸಿಕೊಳ್ಳಲಾಗಿದೆ ಹಾಗೂ ಚರಿತ್ರೆ ರಚನೆಯಲ್ಲಿ ಬಳಸಿಕೊಳ್ಳಲಾಗಿದೆ ಎಂಬುದನ್ನು ಈ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ವಾಲ್ಟೇರ್, ಹೇಗಲ್‌ರವರು ಈ ಕುರಿತು ಪ್ರತಿಪಾದಿಸಿರುವುದನ್ನು ಸೂಕ್ಷ್ಮವಾಗಿ ಅವಲೋಕಿಸಿ ಚರಿತ್ರೆಯ ತಾತ್ವಿಕ ಚಿಂತನೆಯ ಬಗ್ಗೆ ತಿಳಿಸಿದ್ದಾರೆ.[೧] ಘಟನೆಗಳ ಬಗ್ಗೆ ಚರಿತ್ರೆಕಾರ ವಿಶ್ಲೇಷಣೆ ನಡೆಸಬಾರದೆನ್ನುವ ಪಾಸಿಟಿವಿಸ್ಟರ ನಿಲುವುಗಳನ್ನು ಕಾಲಿಂಗ್‌ವುಡ್ ವಿರೋಧಿಸಿದರು. ಇವರ ದೃಷ್ಟಿಕೋನದಲ್ಲಿ ಚರಿತ್ರೆ ಅಧ್ಯಯನದಲ್ಲಿ ಘಟನೆಗಳನ್ನು ದಾಖಲಿಸುವುದಷ್ಟೆ ಚರಿತ್ರೆಕಾರನ ಕೆಲಸವಲ್ಲ. ಆ ಘಟನೆಗಳನ್ನು ಅರಿತು ಅದರಲ್ಲಿರುವ ಆಲೋಚನೆಗಳನ್ನು ಗುರುತಿಸುವುದು ಚರಿತ್ರೆಕಾರನ ಉದ್ದೇಶವಾಗಿರಬೇಕು ಎಂದಿದ್ದಾರೆ. ಚರಿತ್ರೆ ರಚನೆ ಕುರಿತು ಇ.ಎಚ್.ಕಾರ್ ಅವರು ತಮ್ಮ ಕೃತಿ 'ವಾಟ್ ಈಸ್ ಹಿಸ್ಟರಿ' ಎಂಬುದರಲ್ಲಿ ತಿಳಿಸಿದ್ದಾರೆ. ಇತಿಹಾಸಕಾರನ ಚಿಂತನೆಗಳು ಸತ್ಯದಿಂದ ಕೂಡಿರುತ್ತವೆ. ತನ್ನ ತತ್ವಶಾಸ್ತ್ರ ಸೂಕ್ತಿಯನ್ನು ಅಳವಡಿಸಿಕೊಂಡಿರುವುದೇ ಸಮಕಾಲೀನ ಇತಿಹಾಸವಾಗಿದೆ ಎಂಬುದಾಗಿ ತಿಳಿಸಿದ್ದಾರೆ.[೨]

ಭಾರತದ ಚರಿತ್ರೆ ರಚನೆ ಕುರಿತು ಗಂಭೀರ ಚರ್ಚೆ ನಡೆಯುತ್ತಿದೆ. ವಸಾಹತುಕಾಲ ಮತ್ತು ವಸಾಹತೋತ್ತರ ಕಾಲಘಟ್ಟದಲ್ಲಿ ಇಲ್ಲಿನ ಚರಿತ್ರೆ ರಚನೆಗೊಂಡ ಬಗ್ಗೆ ಹಲವು ಚರಿತ್ರೆಕಾರರು ಸೈದ್ಧಾಂತಿಕ ನಿಲುವುಗಳ ಮೂಲಕ ಚರ್ಚೆ ನಡೆಸಿದ್ದಾರೆ. ವಸಾಹತು ಸನ್ನಿವೇಶದಲ್ಲಿ ಬ್ರಿಟಿಷ್ ಹಾಗೂ ಪಾಶ್ಚಾತ್ಯ ಸೈದ್ಧಾಂತಿಕತೆಗಳಿಗೆ ಒಳಗಾದ ನಮ್ಮ ಮನೋ ಚಿಂತನೆಗಳು ಇಂದಿಗೂ ಅವುಗಳಿಂದ ಮುಕ್ತಗೊಂಡಿಲ್ಲ. ಸಾಮಾನ್ಯವಾಗಿ ಚರಿತ್ರೆಯನ್ನು ಅರಸುಮನೆತನಗಳಿಗಷ್ಟೇ ಸೀಮಿತಗೊಳಿಸಿ ಅದೊಂದು ನಡೆದು ಹೋದ ಘಟನೆ ಎನ್ನುವ ತೀರ್ಮಾನವನ್ನು ಕೊಡುವ ಅಧ್ಯಯನಗಳ ಸಂಖ್ಯೆಯೇ ಹೆಚ್ಚಿನದು. ಈ ಬೃಹತ್

ಅರಸುಮನೆತನಗಳ ಚರಿತ್ರೆ ನಿರ್ಮಾಣವು ರಾಜಕೀಯ ಚರಿತ್ರೆಗಷ್ಟೇ ಸೀಮಿತಗೊಂಡಿತು. ಇದರಿಂದಾಗಿ ಚರಿತ್ರೆ ಎಂಬುದು ರಾಜರ ಚರಿತ್ರೆ ಎಂಬ ಸಂಕುಚಿತ ಅರ್ಥ ಪಡೆಯಿತು. ಬೃಹತ್ ಅರಸು ಮನೆತನಗಳಿಗಿಂತ ಚಿಕ್ಕ ಪುಟ್ಟ ಅರಸು ಮನೆತನಗಳ ರಾಜಕೀಯ ಬದಲಾವಣೆಗಳು ಜನಸಾಮಾನ್ಯರ ಬದುಕಿನ ಮೇಲೆ ಹೆಚ್ಚಿನ ಪರಿಣಾಮವುಂಟು ಮಾಡಿದವು.[೩] ಆದರೆ ಅವುಗಳ ಕುರಿತಾಗಿ ಹೆಚ್ಚಿನ ಅಧ್ಯಯನ ನಡೆದಿಲ್ಲ.

ಲಿಖಿತ ದಾಖಲೆಗಳೇ ಉತ್ಕೃಷ್ಟವಾದವು ಎಂದು ಭಾವಿಸಿದ್ದ ಪಾಶ್ಚಾತ್ಯ ಚರಿತ್ರೆ ರಚನಾ ಶಾಸ್ತ್ರವು ನಮ್ಮಲ್ಲಿದ್ದ ಮೌಖಿಕ ಪರಂಪರೆಯನ್ನು ನಗಣ್ಯವೆಂದು ಪರಿಗಣಿಸಿತು. ಈ ದಿಶೆಯಲ್ಲಿಯೇ ಬ್ರಿಟಿಷ್ ಮತ್ತು ಪಾಶ್ಚಾತ್ಯ ಇತಿಹಾಸಕಾರರು 'ಭಾರತೀಯರಿಗೆ ಚರಿತ್ರೆಯೇ ಇಲ್ಲ, ಐತಿಹಾಸಿಕ ಜ್ಞಾನವಿಲ್ಲ' ಎಂದು ಹೇಳಿದ್ದು. ಆದರೆ ಇಲ್ಲಿ ಪುರಾಣ, ಐತಿಹ್ಯ, ಕಥೆ, ಲಾವಣಿ, ದಂತಕತೆ, ಒಗಟು, ಗಾದೆ, ಜಾನಪದ ಹಾಡು, ಕಾವ್ಯ, ನಾಟಕ ಮೊದಲಾದ ಪ್ರಕಾರಗಳಲ್ಲಿ ಚರಿತ್ರೆಯು ಬಾಯಿಂದ ಬಾಯಿಗೆ ಹರಿದುಬಂದು ಜೀವಂತವಾಗಿತ್ತು. ವಸಾಹತೀಕರಣಕ್ಕೆ ಒಳಪಟ್ಟ ಇಲ್ಲಿನ ವಿದ್ವಾಂಸರು ಈ ಜೀವಂತ ಮೌಖಿಕ ದಾಖಲೆಗಳನ್ನು ನಿರ್ಲಕ್ಷಿಸಿದರು. ಕೇವಲ ಲಿಖಿತ ದಾಖಲೆಗಳ ಮೂಲಕ ಚರಿತ್ರೆ ರಚನೆಗೊಂಡಿದ್ದರಿಂದ ಇದು ಸಾಂಪ್ರದಾಯಿಕ ರಾಜಕೀಯ ಚರಿತ್ರೆಯೆಂದೂ ಈ ಹೊತ್ತಿಗೂ ಭಾರತದಲ್ಲಿ ಸಾಂಪ್ರದಾಯಿಕ ಚರಿತ್ರೆ ಹಲವು ಬಗೆಯ ಟೀಕೆ, ಪ್ರತಿಕ್ರಿಯೆಗಳಿಗೆ ಒಳಗಾಗಿದೆ.

ರಾಷ್ಟ್ರೀಯ ನೆಲೆಗಟ್ಟಿನಿಂದಲೇ ಚರಿತ್ರೆಯನ್ನು ನೋಡಬೇಕೆನ್ನುವ ಬರವಣಿಗೆಯ ಮಾದರಿಯಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಚರಿತ್ರೆ ಬರವಣಿಗೆ ಮತ್ತು ವಿಶ್ಲೇಷಣೆಗೆ ಸಂಬಂಧಪಟ್ಟಂತೆ ಹಲವು ಪಂಥಗಳು ಹುಟ್ಟಿಕೊಂಡವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ವಸಾಹತುಶಾಹಿ ಪಂಥ, ರಾಷ್ಟ್ರೀಯ ವಾದಿ ಪಂಥ, ಮಾರ್ಕ್ಸ್‌ವಾದಿ ಪಂಥ ಹಾಗೂ ಸಬಾಲ್ಟರ್ನ್ ಪಂಥ. ಈ ಪಂಥಗಳ ಸಿದ್ಧಾಂತಗಳು ಭಾರತದ ಚರಿತ್ರೆಗೆ ಸಂಬಂಧಿಸಿದಂತೆ ಕಂಡುಬಂದರೂ ಸಹ ಕರ್ನಾಟಕ ಚರಿತ್ರೆ ನೇರವಾಗಿ ಇವುಗಳಿಂದ ಪ್ರಭಾವಿತಗೊಂಡಿದೆ.

ಸರ್ ವಿಲಿಯಮ್ ಜೋನ್ಸ್, ಎಫ್.ಮ್ಯಾಕ್ಸ್‌ಮುಲ್ಲರ್, ಅಲೆಗ್ಸಾಂಡರ್ ಕನ್ನಿಂಗ್ ಹ್ಯಾಮ್ ಮುಂತಾದ ಸಂಶೋಧಕರು ಪ್ರತಿನಿಧಿಸುವ ಪಂಥವನ್ನು ಓರಿಯಂಟಲಿಸ್ಟ್(ಪೌರತ್ಯವಾದ) ಎಂದು ಕರೆಯಲಾಗಿದೆ. ಇವರು ಪ್ರಾಚೀನ ಚರಿತ್ರೆಯನ್ನು ಅಧ್ಯಯನ ವಸ್ತುವನ್ನಾಗಿ ಆಯ್ಕೆ ಮಾಡಿಕೊಂಡರು. ಈ ಚರಿತ್ರೆಕಾರರು 'ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲ' ಭಾರತವು ಆಧ್ಯಾತ್ಮಿಕ, ಅಲೌಕಿಕ ಚಿಂತನೆಗಳಿಂದ ಕೂಡಿದ ದೇಶ ಎಂಬುದಾಗಿ ಚಿತ್ರಿಸಿದರು. ವಿನ್‌ಸೆಂಟ್‌ಸ್ಮಿತ್, ಜೇಮ್ಸ್ ಮಿಲ್, ಮಾರ್ಕ್ಸ್‌ವಿಲ್ಕ್ಸ್ ಮುಂತಾದ ಸಾಮ್ರಾಜ್ಯಶಾಹಿ ಚರಿತ್ರೆಕಾರರು ಭಾರತದಲ್ಲಿ ಬ್ರಿಟಿಷರ 'ಒಡೆದು ಆಳುವ ನೀತಿ'ಗೆ ಪೂರಕವಾಗಿ ಚರಿತ್ರೆಯನ್ನು ರಚಿಸಿದರು. ಧಾರ್ಮಿಕ ಕೋಮುಭಾವನೆಗಳು ಮೂಡುವಂತೆ ಮಾಡಿದರು. ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆಯನ್ನು ಬಲಪಡಿಸುವುದು ಇವರ ಉದ್ದೇಶವಾಗಿತ್ತು.[೪]

ವಸಾಹತುಶಾಹಿಗಳ ನಿಲವುಗಳನ್ನು ಎದುರಿಸಲು ರಾಷ್ಟ್ರೀಯವಾದಿ ಪಂಥ ಹುಟ್ಟಿಕೊಂಡಿತು. ಆದರೂ ಈ ಪಂಥದ ಚರಿತ್ರೆಕಾರರು ಸಾಮ್ರಾಜ್ಯಶಾಹಿ ಚರಿತ್ರೆಕಾರರ ಹಲವು ಅಂಶಗಳನ್ನು ತನ್ನ ಸಿದ್ಧಾಂತದೊಳಗೆ ಸೇರಿಸಿಕೊಂಡರು. ಎ.ಎಸ್.ಆಲ್ಟೇಕರ್, ಕೆ.ಪಿ.ಜಯಸ್ವಾಲ್, ಆರ್.ಜಿ.ಭಂಡಾರ್‌ಕರ್, ಆರ್.ಸಿ.ಮಜುಂದಾರ್, ಕೆ.ಎ.ನೀಲಕಂಠಶಾಸ್ತ್ರಿ, ಹೇಮಚಂದ್ರರಾಯ್ ಚೌದರಿ ಮುಂತಾದ ರಾಷ್ಟ್ರೀಯವಾದಿ ಚರಿತ್ರೆಕಾರರು ಅರಸಕೇಂದ್ರಿತ ಮತ್ತು ಧರ್ಮಕೇಂದ್ರಿತ ಚಿಂತನೆಗಳಿಗೆ ಹೆಚ್ಚು ಮಹತ್ವಕೊಟ್ಟರು. ಮಾರ್ಕ್ಸ್‌ವಾದಿ ಪಂಥವು ವಸಾಹತುಶಾಹಿ ಮತ್ತು ರಾಷ್ಟ್ರೀಯವಾದಿ ಪಂಥಗಳಿಗಿಂತ ಭಿನ್ನವಾದ ರೀತಿಯಲ್ಲಿ ಚರಿತ್ರೆಯನ್ನು ವ್ಯಾಖ್ಯಾನಿಸಿತು. ಚರಿತ್ರೆಯಲ್ಲಾದ ಬದಲಾವಣೆಗಳಿಗೆ ಆಯಾ ಸಂದರ್ಭದಲ್ಲಾದ ಉತ್ಪಾದನಾ ವಿಧಾನವೇ ಕಾರಣ ಎಂಬ ವಾದವನ್ನು ಮಾರ್ಕ್ಸ್‌ವಾದಿ ಚರಿತ್ರೆಕಾರರು ಮುಂದಿಟ್ಟರು. ಭಾರತದಲ್ಲಿ ಡಿ.ಡಿ.ಕೊಸಾಂಬಿ, ಆರ್.ಎಸ್.ಶರ್ಮ, ರೋಮಿಲಾ ಥಾಪರ್, ಡಿ.ಎನ್.ಝಾ, ಇರ್ಫಾನ್ ಹಬೀಬ್, ಬಿಪನ್‌ಚಂದ್ರ, ಸುಮಿತ್ ಸರ್ಕಾರ್ ಮುಂತಾದವರು ಮಾರ್ಕ್ಸ್‌ವಾದಿ ಪಂಥದ ಚರಿತ್ರೆಕಾರರಾಗಿದ್ದಾರೆ. ಇವರುಗಳು ರಾಜಕೀಯದಿಂದ ದೂರವಾದ ಚರಿತ್ರೆಯತ್ತ ಒಲವು ತೋರಿದರು. ಅರಸರ ಚರಿತ್ರೆ ಮೇಲ್ವರ್ಗದ ಚರಿತ್ರೆ ಎನ್ನುವ ಪೂರ್ವಾಗ್ರಹ ಪೀಡಿತ ಸಿದ್ಧಾಂತಗಳನ್ನು ಒಡೆಯುವುದರಲ್ಲಿ ಇವರ ಬರವಣಿಗೆಗಳು ಯಶಸ್ವಿಯಾದವು. ಸಾಮಾಜಿಕ ಮತ್ತು ಆರ್ಥಿಕ ನೆಲೆಯಿಂದ ಚರಿತ್ರೆ ರಚಿಸುವ ಇವರ ಪ್ರಯತ್ನವು ಅಲಕ್ಷಿತ ಸಮುದಾಯಕ್ಕೆ ನ್ಯಾಯ ಒದಗಿಸಿತು.[೫]

ಇಟಲಿಯ ಆ್ಯಂಟೋನಿಯೋ ಗ್ರಾಂಸಿಯು ಸಬಾಲ್ಟರ್ನ್ ಪಂಥವನ್ನು ಹುಟ್ಟುಹಾಕಿದನು. ಇದರ ಅರ್ಥ ಕೆಳಸ್ತರದ ಚರಿತ್ರೆ ಎಂಬುದಾಗಿದೆ. ಭಾರತದ ಇತಿಹಾಸ ಲೇಖನದಲ್ಲಿ ಇಂಥ ಹೊಸದೊಂದು ಸಂಪ್ರದಾಯವನ್ನು ಹುಟ್ಟು ಹಾಕಿದ ಸಬಾಲ್ಟರ್ನ್ ಅಧ್ಯಯನಕಾರರು ಪ್ರಾರಂಭದಿಂದಲೇ ವಸಾಹತು ಇತಿಹಾಸವನ್ನು ಹೆಜೆಮೊನಿಯ ಪರಿಕಲ್ಪನೆಯಲ್ಲಿ ಟೀಕೆಗೊಳಪಡಿಸಿದರು. ಇವರು ರಾಷ್ಟ್ರೀಯವಾದಿ ಇತಿಹಾಸದಂತೆ ಮಾರ್ಕ್ಸ್‌ವಾದಿ ಇತಿಹಾಸವೂ ಹೇಗೆ ಆಳುವವರ ಇತಿಹಾಸವನ್ನು ಕಟ್ಟಿಕೊಟ್ಟಿದೆ ಎಂಬುದನ್ನು ವಿಶ್ಲೇಷಿಸಿದರು. ಮಾರ್ಕ್ಸ್‌ವಾದವನ್ನು 'ಒಂದು ಸ್ಥಾಪಕ ತತ್ವ' ಎಂದು ಸಬಾಲ್ಟರ್ನ್ ಇತಿಹಾಸಕಾರರು ತಿರಸ್ಕರಿಸುತ್ತಾರೆ.[೬] ಸಮಾಜದ ಕೆಳಸ್ತರದ ಬಹುಸಂಖ್ಯಾತ ಜನರ ಚರಿತ್ರೆಯು ನಿಜವಾದ ಚರಿತ್ರೆಯಾಗಿದ್ದು ಅದು ಶೋಷಣೆಗೆ ಒಳಗಾಗಿದೆ ಎಂಬುದು ಆ್ಯಂಟೋನಿಯೋ ಗ್ರಾಂಸಿಯ ಅಭಿಪ್ರಾಯ. ರಂಜಿತ್ ಗುಹಾ, ದಿಪೇಶ್ ಚಕ್ರವರ್ತಿ, ಪಾರ್ಥ ಚಟರ್ಜಿ, ಗ್ಯಾನೇಂದ್ರಪಾಂಡೆ, ಡೇವಿಡ್ ಹರ್ಡಿಮನ್, ಮುಂತಾದವರನ್ನು ಭಾರತದಲ್ಲಿ ಸಬಾಲ್ಟರ್ನ್ ಚರಿತ್ರೆಕಾರರಾಗಿ ಉದಾಹರಿಸಬಹುದಾಗಿದೆ.

ಕರ್ನಾಟಕದಲ್ಲಿ ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಪಂಥದ ಸಿದ್ಧಾಂತದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿರುವ ಚರಿತ್ರೆಕಾರರ ಸಂಖ್ಯೆ ಕಡಿಮೆ ಎಂದೇ ಹೇಳಬೇಕು. ಸ್ವಲ್ಪಮಟ್ಟಿಗೆ ಈ ಸಿದ್ಧಾಂತದ ಹಿನ್ನೆಲೆಯಲ್ಲಿ ಕೆಲಸ ಮಾಡಿದವರೆಂದರೆ ಎಸ್.ಚಂದ್ರಶೇಖರ್, ಸೆಬಾಸ್ಟಿಯನ್ ಜೋಸೆಫ್, ಬಿ. ಸುರೇಂದ್ರರಾವ್, ಎಸ್.ಶೆಟ್ಟರ್, ಕೇಶವನ್ ವೆಲುತಟ್, ಎಸ್.ಎ.ಬಾರಿ, ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್, ಆರ್.ಎನ್.ನಂದಿ ಇನ್ನು ಮುಂತಾದವರು.

ಜನರನ್ನು ಕುರಿತು ಅಧ್ಯಯನ ನಡೆಸುವಾಗ ವಿವಿಧ ಪಂಥಗಳು ಯಾವ ಯಾವ ರೀತಿಯ ಜನರ ಅಧ್ಯಯನ ನಡೆಸಿವೆ ಎಂಬುದನ್ನು ಗಮನಿಸುವುದು ಅನಿವಾರ್ಯ. ವಸಾಹತುಶಾಹಿ ಚರಿತ್ರೆಕಾರರು ಬಿಳಿ ಜನರ ದೃಷ್ಟಿಯಿಂದ ಭಾರತದ ಜನರ ಅಧ್ಯಯನ ನಡೆಸಿದರು. ರಾಷ್ಟ್ರೀಯವಾದಿ ಚರಿತ್ರೆಕಾರರು ಮೇಲ್ವರ್ಣದ, ಮೇಲ್ವರ್ಗದ ಜನರ ದೃಷ್ಟಿಯಿಂದ ಚರಿತ್ರೆ ರಚಿಸಿದರು, ಮಾರ್ಕ್ಸ್‌ವಾದಿ ಚರಿತ್ರೆಕಾರರು ಶೋಷಿತ ವರ್ಗದ ಜನರ ದೃಷ್ಟಿಯಿಂದ ಚರಿತ್ರೆ ನಿರ್ಮಿಸಿದರು. ಸಬಾಲ್ಟರ್ನ್ ಚರಿತ್ರೆಕಾರರು ಸಮಾಜದ ಕೆಳಸ್ತರದ, ಅಲಕ್ಷಿತ ಜನರ ಕುರಿತು ಚರಿತ್ರೆಯನ್ನು ರಚಿಸಿದರು.[೭]

ಭಾರತವನ್ನು ಕುರಿತು ೧೯೮೦ರ ನಂತರ ಬರೆದ ಕೆಲ ಪಾಶ್ಚಾತ್ಯ ಚರಿತ್ರೆಕಾರರು ಸಬಾಲ್ಟರ್ನ್ ಸಂಪ್ರದಾಯಕ್ಕಿಂತ ವಿಭಿನ್ನವಾದ ವಸಾಹತೋತ್ತರ ವಾದಗಳನ್ನು ಮೈಗೂಡಿಸಿಕೊಂಡಿದ್ದಾರೆ. ಇವರಲ್ಲಿ ರೋನಾಲ್ಡ್ ಇಂಡೆನ್, ನಿಕೋಲಸ್ ಡರ್ಕ್ಸ್, ಶೆಲ್ಡನ್ ಪೊಲೊಕ್, ಡೇವಿಡ್ ಲಡನ್ ಮುಂತಾದವರು ಇದ್ದಾರೆ. ನಿಕೋಲಸ್ ಡರ್ಕ್ಸ್ ಅವರು ತಮ್ಮ 'ಹೋಲೊಕ್ರೌನ್' ಗ್ರಂಥದಲ್ಲಿ ವಸಾಹತುಪೂರ್ವ ಭಾರತೀಯ ರಾಜ್ಯಗಳ ಕುರಿತು ವಸಾಹತು ಕಾಲದಲ್ಲಿ ಬೆಳೆದು ಬಂದ ಕಲ್ಪನೆಗಳು ಹೇಗೆ ನಿರಾಧಾರವಾದವುಗಳು ಎಂಬುದನ್ನು ವಿಶ್ಲೇಷಿಸಿದ್ದಾರೆ. ಅವರ ಮತ್ತೊಂದು ಕೃತಿ 'ಕಾಸ್ಟ್ಸ್ ಆಫ್ ಮೈಂಡ್'ನಲ್ಲಿ ಭಾರತದಲ್ಲಿ ಜಾತಿ ಪದ್ಧತಿಯ ರಚನೆ ವಸಾಹತು ಕಾಲದಲ್ಲಿ ಹೇಗೆ ನಡೆಯಿತು ಎಂಬುದನ್ನು ತಿಳಿಸಿದ್ದಾರೆ.[೮] ಈ ರೀತಿ ಚರಿತ್ರೆ ಬರವಣಿಗೆಯಲ್ಲಿ ವಿಭಿನ್ನ ಪಂಥಗಳು ಹುಟ್ಟಿಕೊಂಡು ಚಾರಿತ್ರಿಕ ಘಟನೆಗಳನ್ನು ಸೂಕ್ಷ್ಮವಾಗಿ ಅವಲೋಕಿಸುವುದರ ಮೂಲಕ ತಮ್ಮ ಸೈದ್ಧಾಂತಿಕ ನಿಲುವುಗಳನ್ನು ಚರಿತ್ರೆಕಾರರು ವ್ಯಕ್ತಪಡಿಸಿದ್ದಾರೆ.

ರಾಷ್ಟ್ರೀಯ ನೆಲೆಗಟ್ಟಿನಿಂದಲೇ ಚರಿತ್ರೆಯನ್ನು ನೋಡಬೇಕೆನ್ನುವ ಬರವಣಿಗೆ ಮಾದರಿಯಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಮಾರ್ಕ್ಸ್‌ವಾದಿ ಬರವಣಿಗೆಗಳು, ಸಬಾಲ್ಟರ್ನ್ ಚರಿತ್ರೆ ಅಧ್ಯಯನಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತಿವೆ. ಮಾರ್ಕ್ಸ್‌ವಾದಿ ದೃಷ್ಟಿಕೋನದಿಂದ ಚರಿತ್ರೆಯನ್ನು ನೋಡುವಂತಹ ಮಾದರಿಗಳು ರಾಷ್ಟ್ರೀಯವಾದಿ ನೆಲೆಗಟ್ಟಿನಿಂದ ಚರಿತ್ರೆಯನ್ನು ನೋಡುವ ಕ್ರಮವನ್ನು ಪ್ರಶ್ನಿಸಿದರೂ ಸಹ ಬಹುತೇಕವಾಗಿ ರಾಷ್ಟ್ರೀಯವಾದಿ ಚರಿತ್ರೆ ಹಾಕಿಕೊಟ್ಟ ವ್ಯಾಪ್ತಿಯೊಳಗೆ ಚರ್ಚೆಗಳಾದವು. ಮಾರ್ಕ್ಸ್‌ವಾದಿ ಚರಿತ್ರೆಯೂ 'ಯೂನಿವರ್ಸಲ್' ಮಾದರಿಗಳನ್ನು ನವ ಮಾರ್ಕ್ಸ್‌ವಾದಿಗಳು ಪ್ರಶ್ನಿಸುವುದರೊಂದಿಗೆ ಹುಟ್ಟಿದಂತಹುದು. ಭಾರತದಲ್ಲಿ ಕಳೆದ ಎರಡೂವರೆ ದಶಕಗಳಿಂದ ಸಬಾಲ್ಟರ್ನ್ ಅಧ್ಯಯನದ ಮಾದರಿಗಳು ಮತ್ತು ಚಿಂತನೆಗಳು ಪ್ರಚಲಿತದಲ್ಲಿರುವುದನ್ನು ಕಾಣಬಹುದು. ಕರ್ನಾಟಕದಲ್ಲಿಯೂ ಈ ಮಾದರಿಯ ಬರವಣಿಗೆಗಳು ಇತ್ತೀಚೆಗೆ ಕಂಡುಬರುತ್ತಿವೆ.

ವಸಾಹತುಶಾಹಿ ಆಡಳಿತದ ಅಂತಿಮ ವೇಳೆಗೆ ಸಮಾಜವಾದ, ಸಮತಾವಾದ, ಪ್ರಜಾಪ್ರಭುತ್ವವಾದ ಸಿದ್ಧಾಂತಗಳು ರಾಷ್ಟ್ರೀಯತೆಯೊಂದಿಗೆ ಕಂಡುಬಂದವು. ಪರಿಣಾಮವಾಗಿ ಚರಿತ್ರೆ ಅಧ್ಯಯನ ಕೆಳಸ್ತರದವರೆಗೂ ವಿಸ್ತಾರಗೊಂಡಿತು. ಕೇವಲ ಬಲಿಷ್ಠ ರಾಜವಂಶಗಳೇ ಅಲ್ಲದೆ ಅಲ್ಲಿ ನೆಲೆಸಿದ್ದ ಜನರ ನಡುವಿನ ಧರ್ಮ,

ಜಾತಿ, ವರ್ಗ ಹಾಗೂ ಅವುಗಳ ಸಂಘಗಳನ್ನು ಕುರಿತು ಅಧ್ಯಯನಗಳಾದವು. ಜನಸಾಮಾನ್ಯರ ಸಾಮಾಜಿಕ ಸ್ಥಾನಮಾನ, ಆರ್ಥಿಕ ಪರಿಸ್ಥಿತಿ, ಅವರ ಸಂಸ್ಕೃತಿ ಕುರಿತು ವಿಶ್ಲೇಷಿಸಲಾಯಿತು. ಈ ದೃಷ್ಟಿಕೋನದಿಂದ ಚರಿತ್ರೆಯು ವಿವಿಧ ಆಯಾಮಗಳಲ್ಲಿ ಸ್ಥಳೀಯ ಚರಿತ್ರೆ, ರೈತರ ಚರಿತ್ರೆ, ಕಾರ್ಮಿಕರ ಚರಿತ್ರೆ, ದಲಿತರ ಚರಿತ್ರೆ, ಮಹಿಳಾ ಚರಿತ್ರೆ, ತಳ ಸಮುದಾಯದ ಚರಿತ್ರೆ ಮೊದಲಾಗಿ ಅಧ್ಯಯನಗಳಾದವು. ಇವೆಲ್ಲವು ೨೦ ಮತ್ತು ೨೧ ನೇ ಶತಮಾನದಲ್ಲಿ ಕಂಡುಬಂದ ಚರಿತ್ರೆ ಬರವಣಿಗೆಯಲ್ಲಿನ ಬದಲಾವಣೆಯೊಂದಿಗೆ ರಚನಾಶಾಸ್ತ್ರದಲ್ಲಿ ಸೇರಿಕೊಂಡಿವೆ. ಇಂತಹ ಚರಿತ್ರೆ ಅಧ್ಯಯನಕ್ಕೆ ನಾಗರಿಕತೆ, ಆಧುನೀಕರಣ, ಜಾಗತೀಕರಣ ಅಂಶಗಳು ಪ್ರೇರಣೆ ನೀಡಿವೆ.

ಪ್ರಸ್ತುತ ಅಧ್ಯಯನವು ತುಮಕೂರು ಪ್ರದೇಶದ ಚರಿತ್ರೆ ಬರವಣಿಗೆಯ ಮಾದರಿಗಳನ್ನು ಅಭ್ಯಸಿಸುವ ಉದ್ದೇಶವನ್ನು ಹೊಂದಿದೆ. ಈ ಮೂಲಕ ಸ್ಥಳೀಯವಾಗಿ ಚರಿತ್ರೆಯನ್ನು ಗುರುತಿಸುವ ಕ್ರಮಗಳನ್ನು ಅಭ್ಯಸಿಸುವಂತದಾಗಿದೆ. ಭಾರತದ ಮತ್ತು ಕರ್ನಾಟಕದ ಬೃಹತ್ ಚರಿತ್ರೆಯೊಳಗೆ ಅವು ಮರೆಯಾದ ಸಂಗತಿಗಳನ್ನು ಅವಲೋಕಿಸುವ ಪ್ರಯತ್ನ ನಡೆಸಲಾಗಿದೆ. ವಸಾಹತುಪೂರ್ವ ಪ್ರಾಚೀನ ಚರಿತ್ರೆಯಿಂದ ಹಿಡಿದು ವಸಾಹತು ಕಾಲ ಹಾಗೂ ಏಕೀಕರಣ ಕಾಲಘಟ್ಟದ ಕರ್ನಾಟಕ ಚರಿತ್ರೆವರೆಗೆ ತುಮಕೂರು ಪ್ರದೇಶಕ್ಕೆ ಸಂಬಂಧಿಸಿದ ಚಾರಿತ್ರಿಕ ವಿವರಗಳನ್ನು ವಿಶ್ಲೇಷಿಸಲಾಗಿದೆ.

ಈ ಅಧ್ಯಯನದ ಬರವಣಿಗೆಯಲ್ಲಿ ತುಮಕೂರು ಪ್ರದೇಶದ ಚರಿತ್ರೆ ಬರವಣಿಗೆಗಳಲ್ಲಿ ವಿದ್ವಾಂಸರುಗಳು ಬರೆದಿರುವ ಕೃತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಲಾಗಿದೆ. ಇವರ ಬರವಣಿಗೆಗಳಲ್ಲಿ ತಾಂತ್ರಿಕ ಪರಿಣತಿ ಇಲ್ಲದಿದ್ದರೂ ದೊರೆತ ಮಾಹಿತಿಗಳನ್ನು ಒಂದೆಡೆ ಕಲೆ ಹಾಕಿ ಚರಿತ್ರೆಯನ್ನು ರೂಪಿಸಿ ಕೊಡುವ ಪರಿಣತಿಯನ್ನು ಗಮನಿಸಲಾಗಿದೆ. ತುಮಕೂರು ಪ್ರದೇಶಕ್ಕೆ ಸಂಬಂಧಿಸಿದ ಅನೇಕ ವಿವರಗಳನ್ನು ತಾಂತ್ರಿಕವಾಗಿ ಪರಿಣತಿ ಪಡೆದ ಚರಿತ್ರೆಕಾರರು ಕ್ರೋಢೀಕರಿಸಿ ವಿಮರ್ಶಿಸಿರುವುದನ್ನು ಗಮನಿಸಲಾಗಿದೆ. ವಸಾಹತು ಕಾಲ ಮತ್ತು ಏಕೀಕರಣ ಕಾಲಘಟ್ಟದಲ್ಲಿನ ಭಾಗಗಳನ್ನು ಅಧ್ಯಯನ ಮಾಡಿದಾಗ ಸಂಘಟನೆಗಳ ನಾಯಕರುಗಳು ತಾವು ನಂಬಿದ ತತ್ವ-ಸಿದ್ಧಾಂತಗಳನ್ನು ಪ್ರತಿನಿಧಿಸುವ ಕುರಿತಾದ ವಿಚಾರಗಳನ್ನು ತುಮಕೂರು ಪ್ರದೇಶದ ಚರಿತ್ರೆ ಬರವಣಿಗೆಯಲ್ಲಿ ಉಲ್ಲೇಖಿಸಿರುವುದನ್ನು ಗಮನಿಸ ಬಹುದಾಗಿದೆ.

ಭಾರತದಲ್ಲಿ ಇತ್ತೀಚೆಗೆ ಚರಿತ್ರೆ ಬರವಣಿಗೆಯ ವಿವಿಧ ಮಾದರಿಗಳ ಬಗ್ಗೆ ಚರ್ಚೆ ನಡೆಯುತ್ತಿದೆ. ಈ ಹಿನ್ನಲೆಯಲ್ಲಿ ಚರಿತ್ರೆ ಬರವಣಿಗೆ ಕುರಿತ ಸಾಕಷ್ಟು ವಿಚಾರಸಂಕಿರಣಗಳು ನಡೆಯುತ್ತಿವೆ. ಕರ್ನಾಟಕದಲ್ಲಿಯೂ ಮಾರ್ಕ್ಸ್‌ವಾದಿ, ರಾಷ್ಟ್ರೀಯವಾದಿ, ಸಬಾಲ್ಟರ್ನ್ ಮಾದರಿಯ ಅಧ್ಯಯನಗಳು ನಡೆದಿರುವುದು ಬಹಳ ಕಡಿಮೆಯಾದರೂ ಈ ಸೈದ್ಧಾಂತಿಕ ವಿಚಾರಗಳಿಂದ ಪ್ರಭಾವಿತಗೊಂಡು ಚರಿತ್ರೆ ರಚನೆಗೆ ಪ್ರಯತ್ನಿಸಿರುವುದನ್ನು ಕಾಣಬಹುದಾಗಿದೆ. ಇದರಿಂದ ಚರಿತ್ರೆಯ ವಾಸ್ತವ ಒಳನೋಟಗಳನ್ನು

ಸ್ಪಷ್ಟವಾಗಿ ವ್ಯಕ್ತಪಡಿಸಿದಂತಾಗಿದೆ. ಈ ಹಿನ್ನೆಲೆಯಲ್ಲಿ ತುಮಕೂರು ಪ್ರದೇಶದ ಚರಿತ್ರೆ ಅಧ್ಯಯನವನ್ನು ಮಾಡಲಾಗಿದೆ.

ಪ್ರಸ್ತುತ ಅಧ್ಯಯನವು ತುಮಕೂರು ಪ್ರದೇಶದ ವಸಾಹತುಪೂರ್ವ, ವಸಾಹತುಕಾಲ ಮತ್ತು ಏಕೀಕರಣ ಕಾಲಘಟ್ಟದವರೆಗಿನ ಚರಿತ್ರೆ ಎಂಬ ವಿನ್ಯಾಸಗಳಲ್ಲಿ ಮುಂದುವರೆಯುವುದು. ವಿಷಯವನ್ನು ಸರಳಗೊಳಿಸುವ ಸಲುವಾಗಿ ಪ್ರಾಚೀನ ಚರಿತ್ರೆ, ಮಧ್ಯಕಾಲೀನ ಚರಿತ್ರೆ ಎಂಬುದಾಗಿ ವಿಭಾಗಿಸಲಾಗಿದೆ. ತುಮಕೂರು ಪ್ರದೇಶಕ್ಕೆ ಸಂಬಂಧಿಸಿದ ಚಾರಿತ್ರಿಕ ಕೃತಿಗಳನ್ನು ಮೂರು ವರ್ಗಗಳಾಗಿ ವಿಂಗಡಿಸಲಾಗಿದೆ.

ವಸಾಹತು ಕಾಲದಲ್ಲಿ ಬ್ರಿಟಿಷರು ಹಾಗೂ ಇತರ ಪಾಶ್ಚಾತ್ಯ ವಿದ್ವಾಂಸರುಗಳು ರಚಿಸಿದ ಹಲವು ಬಗೆಯ ಕೃತಿಗಳನ್ನು ಮೊದಲನೆ ವರ್ಗಕ್ಕೆ ಸೇರಿಸಲಾಗಿದೆ. ನಂತರದ ಕಾಲದಲ್ಲಿ ರಾಷ್ಟ್ರೀಯವಾದಿ ಚರಿತ್ರೆಕಾರರು ಬರೆದ ಕೃತಿಗಳನ್ನು ಎರಡನೆಯ ವರ್ಗಕ್ಕೆ ಸೇರಿಸಲಾಗಿದೆ. ನಂತರ ಕಾಲದಲ್ಲಿ ರಚನೆಯಾದ ಕೃತಿಗಳನ್ನು ಮೂರನೆಯ ವರ್ಗಕ್ಕೆ ಸೇರಿಸಲಾಗಿದೆ. ಈ ಮೂರನೆಯ ವರ್ಗದ ಕೃತಿಗಳು ಬಹುತೇಕವಾಗಿ ಭಾರತೀಯ ವಿದ್ವಾಂಸರುಗಳು ದೊರೆತ ದಾಖಲೆಗಳ ಆಧಾರದ ಮೇಲೆ ರಚಿಸಿರುವುದನ್ನು ಕಾಣಬಹುದು. ಅಂದರೆ ಇದರಲ್ಲಿ ಲಿಖಿತ ಮತ್ತು ಅಲಿಖಿತ ಆಧಾರಗಳು ಸೇರಿವೆ. ಈ ಹಿನ್ನೆಲೆಯಲ್ಲಿ ತುಮಕೂರು ಪ್ರದೇಶ ಕುರಿತಾದ ಚಾರಿತ್ರಿಕ ದಾಖಲೆಗಳ ಸಾಂಕೇತಿಕ ಕೃತಿಗಳನ್ನು ಸೈದ್ಧಾಂತಿಕವಾಗಿ ವಿಶ್ಲೇಷಿಸಲಾಗಿದೆ.

## ಅಧ್ಯಯನದ ಉದ್ದೇಶ

ಆಧುನಿಕ ಯುಗದಲ್ಲಿ ಸ್ಥಳೀಯ ಚರಿತ್ರೆ ದಿನೇ ದಿನೇ ಮಹತ್ವ ಪಡೆಯುತ್ತಿದೆ. ಜನತೆಯಿಂದ ಪ್ರಭುತ್ವವನ್ನು ನೋಡುವ ದೃಷ್ಟಿಕೋನದಲ್ಲಿ ಚರಿತ್ರೆ ಬರವಣಿಗೆ ಕಂಡುಬರುತ್ತಿದೆ. ಬೃಹತ್ ಸಾಮ್ರಾಜ್ಯಗಳನ್ನು ಕುರಿತು ಅಧ್ಯಯನ ಮಾಡುವುದರ ಜೊತೆಗೆ ಸ್ಥಳೀಯ ಪ್ರದೇಶಗಳ ಚರಿತ್ರೆಯನ್ನು ಗುರುತಿಸುವ ಕಾರ್ಯ ನಡೆಯುತ್ತಿದೆ. ಇದನ್ನು 'ಸ್ಥಳೀಯ ಚರಿತ್ರೆ' ಅಧ್ಯಯನವೆಂದು ಕರೆಯಲಾಗಿದೆ. ಪ್ರಸ್ತುತ ಇಂತಹ ಚರಿತ್ರೆ ಬರವಣಿಗೆ ಹೆಚ್ಚು ಹೆಚ್ಚಾಗಿ ಜನಪ್ರಿಯತೆ ಪಡೆಯುತ್ತಿದೆ. ಚರಿತ್ರೆಯನ್ನು ಹಲವು ಬಗೆಯ ವಾದ ಮತ್ತು ಸಿದ್ಧಾಂತಗಳ ಮೂಲಕವೂ ಅಧ್ಯಯನ ಮಾಡುವ ಮಾದರಿಗಳಲ್ಲಿ ಸ್ಥಳೀಯ ಚರಿತ್ರೆಯು ಒಂದಾಗಿದೆ. ಈ ಚರಿತ್ರೆ ತನ್ನದೇ ಆದ ಭೌಗೋಳಿಕ ಮಿತಿಗೊಳಪಟ್ಟರೂ ಸ್ಥಳೀಯ ಸಮುದಾಯಗಳ, ರಾಜಕೀಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಇತ್ಯಾದಿ ಸಂಗತಿಗಳ ವಿವರಗಳನ್ನು ಸಂಗ್ರಹಿಸಿಕೊಡುವ ವಿಪುಲ ಅವಕಾಶ ಅದಕ್ಕಿದೆ.[೬] ಪ್ರತಿಯೊಂದು ಪ್ರದೇಶಕ್ಕೂ, ವಿಷಯಕ್ಕೂ ತನ್ನದೇ ಆದ ಚರಿತ್ರೆಯಿದ್ದೇ ಇರುತ್ತದೆ. ಇದನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಉತ್ತಮ ಫಲಿತಾಂಶ ವ್ಯಕ್ತವಾಗುವುದಲ್ಲದೆ, ಅವು ಬೃಹತ್ ಸಾಮ್ರಾಜ್ಯಗಳ ಸಾಂಸ್ಕೃತೀಕರಣಕ್ಕೆ ಒಳಪಟ್ಟಿರುವುದು ಕಂಡುಬರುತ್ತದೆ.

ತುಮಕೂರು ಪ್ರದೇಶವು ಗಂಗರಸರ ಆಳ್ವಿಕೆಯಿಂದ ಪ್ರಾರಂಭವಾಗಿ ರಾಷ್ಟ್ರಕೂಟ, ಹೊಯ್ಸಳ, ಚೋಳ, ವಿಜಯನಗರ ಮುಂತಾದ ಪ್ರಬಲ ಸಾಮ್ರಾಜ್ಯದ ಆಡಳಿತಕ್ಕೆ ಒಳಪಟ್ಟಿತ್ತು. ನಂತರ ಸಣ್ಣ-

ಪುಟ್ಟ ಪಾಳೆಯಗಾರರ, ಮೈಸೂರು ಒಡೆಯರ, ಹೈದರಾಲಿ ಹಾಗೂ ಟಿಪ್ಪುಸುಲ್ತಾನರ ಆಡಳಿತಕ್ಕೆ ಒಳಗಾಯಿತು. ಆದರೂ ಚರಿತ್ರೆ ರಚನೆಯಲ್ಲಿ ಇದು ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಇನ್ನು ಆಧುನಿಕ ಕಾಲಕ್ಕೆ ಬಂದಂತೆ ಸ್ವಾತಂತ್ರ್ಯ ಹೋರಾಟ ಹಾಗೂ ನಂತರ ಸಂಗತಿಗಳನ್ನು ಕುರಿತ ಚರಿತ್ರೆಯನ್ನು ಸಂಪೂರ್ಣವಾಗಿ ವಿವರಿಸುವ ಕೃತಿಗಳು ರಚನೆಯಾಗಿಲ್ಲ. ಬೇರೊಂದು ಪ್ರದೇಶದೊಂದಿಗೆ ಹೊಂದಿರುವ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಸಂಬಂಧಗಳ ವಿಚಾರವಾಗಿ ಸ್ಪಷ್ಟ ಮಾಹಿತಿಯನ್ನು ಯಾವ ಕೃತಿಯು ನೀಡದಿರುವುದು ಕಂಡಬರುತ್ತದೆ. ಇದರಿಂದಾಗಿ ಇಂತಹ ನಿರ್ಲಕ್ಷ್ಯಕ್ಕೆ ಒಳಗಾದ ತುಮಕೂರು ಪ್ರದೇಶದ ಚರಿತ್ರೆಯ ಸೈದ್ಧಾಂತಿಕ ದೃಷ್ಟಿಯನ್ನು ತಿಳಿಸುವುದು ಅಗತ್ಯವಾಗಿದೆ. ಇಂತಹ ಉದ್ದೇಶಗಳನ್ನು ಈ ಅಧ್ಯಯನ ಒಳಗೊಂಡಿದೆ.

## ಅಧ್ಯಯನದ ವ್ಯಾಪ್ತಿ

ಪ್ರತಿಯೊಂದು ಅಧ್ಯಯನಕ್ಕೆ ಅದರದ್ದೇ ಆದ ವ್ಯಾಪ್ತಿ ಅಥವಾ ಎಲ್ಲೆಗಳಿರುತ್ತವೆ. ಇದರಿಂದ ವಿಷಯವನ್ನು ಕ್ರಮಬದ್ಧವಾಗಿ ವಿವರಿಸಲು, ಅರ್ಥೈಸಲು ಸುಲಭವಾಗುತ್ತದೆ. ಒಂದು ಸೀಮಿತ ಎಲ್ಲೆಯನ್ನು ಗುರುತಿಸದೆ ಅಧ್ಯಯನ ನಡೆಸಿದರೆ ವಿಷಯ ವಿವರಣೆ ಅಸ್ಪಷ್ಟವಾಗುತ್ತದೆ. ಸಮರ್ಥ ನಿಲುವುಗಳನ್ನು ಹೊಂದುವುದು, ಅರ್ಥವಿವರಣೆ ನೀಡುವುದು ಕಷ್ಟವಾಗುತ್ತದೆ. ಆದ್ದರಿಂದ ಒಂದು ನಿರ್ದಿಷ್ಟ ಚೌಕಟ್ಟಿನೊಳಗೆ ಅಧ್ಯಯನ ನಡೆಸುವುದು ಸೂಕ್ತ, ಅದರಂತೆ ಪ್ರಸ್ತುತ ಅಧ್ಯಯನ ವಿಷಯವು ಅದರದ್ದೇ ಆದ ವ್ಯಾಪ್ತಿಯನ್ನು ಹೊಂದಿರುವುದನ್ನು ಈ ಕೆಳಕಂಡಂತೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ತುಮಕೂರು ಜಿಲ್ಲೆಯು ಕರ್ನಾಟಕ ರಾಜ್ಯದ ಆಗ್ನೇಯ ಭಾಗದಲ್ಲಿದ್ದು ರಾಜ್ಯದ ಒಟ್ಟು ೨೭ ಜಿಲ್ಲೆಗಳಲ್ಲಿ ಒಂದಾಗಿದೆ. ಇದರ ಭೌಗೋಳಿಕ ವಿಸ್ತೀರ್ಣ ೧೦೫೫.೯ ಚದುರ ಕಿ.ಮೀ ವಿಸ್ತೀರ್ಣದಲ್ಲಿ ರಾಜ್ಯದಲ್ಲಿಯೇ ಏಳನೆಯ ಸ್ಥಾನ ಪಡೆದಿದೆ. ತುಮಕೂರು, ತುರುವೇಕೆರೆ, ತಿಪಟೂರು, ಕುಣಿಗಲ್ , ಕೊರಟಗೆರೆ, ಗುಬ್ಬಿ, ಚಿಕ್ಕನಾಯಕನಹಳ್ಳಿ, ಸಿರಾ, ಮಧುಗಿರಿ ಮತ್ತು ಪಾವಗಡ ತಾಲ್ಲೂಕುಗಳನ್ನು ಒಳಗೊಂಡಿದೆ. ಈ ಪ್ರದೇಶವು ಉತ್ತರ ಅಕ್ಷಾಂಶ ೧೨.೪೫° ದಿಂದ ೧೪-೨೪° ಮತ್ತು ೭೬.೨೦° ದಿಂದ ೭೭.೩೨° ಪೂರ್ವರೇಖಾಂಶಗಳ ನಡುವೆ ನೆಲೆಸಿದೆ.

ತುಮಕೂರು ಜಿಲ್ಲೆಯ ಈಶಾನ್ಯದಲ್ಲಿ ಆಂಧ್ರಪ್ರದೇಶದ ಅನಂತಪುರ ಜಿಲ್ಲೆ, ವಾಯುವ್ಯ ಮತ್ತು ಪಶ್ಚಿಮಕ್ಕೆ ಚಿತ್ರದುರ್ಗ, ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳು, ದಕ್ಷಿಣಕ್ಕೆ ಮಂಡ್ಯಜಿಲ್ಲೆ ಹಾಗೂ ಪೂರ್ವಕ್ಕೆ ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳಿಂದ ಸುತ್ತುವರೆದಿದೆ.[೧೦] ಈ ಜಿಲ್ಲೆಯ ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆಯ ಯಾವುದೇ ಭಾಗಕ್ಕೂ ಹೊಂದಿಕೊಂಡಿರದೆ ಸುತ್ತಲೂ ಆಂಧ್ರಪ್ರದೇಶದಿಂದ ಸುತ್ತುವರೆದಿದ್ದು, ಒಂದು ಕಡೆ ಮಾತ್ರ ಚಿತ್ರದುರ್ಗ ಜಿಲ್ಲೆಗೆ ಅಂಟಿಕೊಂಡಿದೆ ಕರ್ನಾಟಕದ ನಕ್ಷೆ ಇರಲಿ, ಆಂಧ್ರ ಪ್ರದೇಶದ ನಕ್ಷೆಯಿರಲಿ ಬಹಳ ಸುಲಭವಾಗಿ ಈ ತಾಲ್ಲೂಕನ್ನು ಗುರುತಿಸಬಹುದು. ತುಮಕೂರು

ಪ್ರದೇಶಕ್ಕೆ ಸಂಬಂಧಿಸಿದ ಚಾರಿತ್ರಿಕ ಕೃತಿಗಳನ್ನು ಅಧ್ಯಯನ ಮಾಡುವುದರ ಮೂಲಕ ಈ ಪ್ರದೇಶದ ತಾಲ್ಲೂಕು ಪ್ರದೇಶಗಳನ್ನು ಅಧ್ಯಯನದ ವ್ಯಾಪ್ತಿಗೆ ತರಲಾಗಿದೆ. ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಹಂತ ಹಂತವಾಗಿ ವಿವರಿಸುವುದಾಗಿದೆ. ಪ್ರತಿಯೊಂದು ಹಂತದಲ್ಲಿ ಲಭ್ಯವಿರುವ ಕೃತಿಗಳನ್ನು, ಲೇಖನಗಳನ್ನು ಸೂಕ್ಷ್ಮವಾಗಿ ಅವಲೋಕಿಸುವ ಮೂಲಕ ಸೈದ್ಧಾಂತಿಕವಾಗಿ ವಿವರಣೆ ನೀಡಲು ಪ್ರಯತ್ನಿಸಲಾಗಿದೆ.

## ಅಧ್ಯಯನ ಸ್ವರೂಪ

ತುಮಕೂರು ಪ್ರದೇಶದ ಚರಿತ್ರೆಯನ್ನು ಅಧ್ಯಯನ ಮಾಡುವಾಗ ಪ್ರಾಚೀನ ಶಿಲಾಯುಗದಿಂದ ಹಿಡಿದು ವಸಾಹತುಕಾಲ ಮತ್ತು ವಸಾಹತ್ತೋತ್ತರ ಕಾಲದವರೆಗೆ ವಿವಿಧ ಹಂತದಲ್ಲಿ ಚರಿತ್ರೆ ಬೆಳವಣಿಗೆ ಹೊಂದಿರುವುದನ್ನು ಸೈದ್ಧಾಂತಿಕವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಇದಕ್ಕೆ ಪೂರಕವೆಂಬಂತೆ ಆಯಾ ಕಾಲಕ್ಕೆ ಸಂಬಂಧಿಸಿದಂತೆ ಹಲವು ವಿದ್ವಾಂಸರುಗಳು ಬರೆದಿರುವ ಕೃತಿಗಳನ್ನು ಅವಲೋಕನ ಮಾಡುವುದರ ಮೂಲಕ ಅವುಗಳ ನಿಲುವುಗಳನ್ನು ಪತ್ತೆ ಹಚ್ಚುವ ಪ್ರಯತ್ನವನ್ನೂ ಮಾಡಲಾಗಿದೆ.

ತುಮಕೂರು ಪ್ರದೇಶದ ಪ್ರಾರಂಭದ ಹಂತ ಶಿಲಾಯುಗವಾಗಿದೆ. ಈ ಹಂತದ ಮಾನವನ ಜೀವನ ಶೈಲಿ ಕುರಿತು ಹಲವಾರು ಸಂಶೋಧಕರು ಅಧ್ಯಯನ ಕೈಗೊಂಡಿದ್ದಾರೆ. ಕ್ರಿ.ಶ.೧೮೬೩ರಲ್ಲಿ ರಾಬರ್ಟ್‌ಬ್ರೂಸ್ ಫೂಟ್ ಅವರ ಚನ್ನೈ ಬಳಿಯ ಪಲ್ಲಾವರಮ್ ನಲ್ಲಿ ಪ್ರಾಚೀನ ಶಿಲಾಯುಗಕ್ಕೆ ಸಂಬಂಧಿಸಿದ ಉಪಕರಣವೊಂದನ್ನು ಪತ್ತೆಹಚ್ಚಿದರು. ಇದು ಪ್ರಥಮವಾಗಿದ್ದು, ನಂತರ ಬೇರೆ ಬೇರೆ ಸಂಶೋಧಕರು ಹೆಚ್ಚಿನ ಅಧ್ಯಯನಕ್ಕೆ ತೊಡಗಿದರು.[೧೧] ತುಮಕೂರು ಪ್ರದೇಶದಲ್ಲಿನ ಕಿಬ್ಬನಹಳ್ಳಿ ಮತ್ತು ಬಿಳಿಗೆರೆ ಭಾಗದಲ್ಲಿ ಶಿಲಾಯುಗ ಸಂಸ್ಕೃತಿಯು ನೆಲೆಗೊಂಡಿದ್ದನ್ನು ಸಂಪತ್ ಐಯ್ಯರ್ ಕ್ರಿ.ಶ.೧೯೨೪ರಲ್ಲಿ ಪತ್ತೆಹಚ್ಚಿ 'ಎ ಪಾಲಿಯೋಲಿಥಿಕ್ ಸೆಟೆಲ್‌ಮೆಂಟ್ ಆಫ್ ಫ್ಯಾಕ್ಟರಿ ಇನ್ ದಿ ಮೈಸೂರ್ ಸ್ಟೇಟ್' ಎಂಬುದರಲ್ಲಿ ದಾಖಲಿಸಿದರು. ೧೯೪೩ ಮತ್ತು ೧೯೫೫ರಲ್ಲಿ ಪುರಾತತ್ವ ಪ್ರಾಚ್ಯವಸ್ತು ಇಲಾಖೆಯ ನಿರ್ದೇಶಕರಾಗಿದ್ದ ಮೈಸೂರು ವಿಶ್ವವಿದ್ಯಾಲಯದ ಎಂ.ಶೇಷಾದ್ರಿಯವರು ಕಿಬ್ಬನಹಳ್ಳಿ, ಬಿಳಿಗೆರೆ, ಬಾಣಸಂದ್ರ ಬೆಟ್ಟದ ಸಾಲಿನಲ್ಲಿ ಶಿಲಾಯುಗ ಸಂಸ್ಕೃತಿ ನೆಲೆಸಿದ್ದರ ಬಗ್ಗೆ ಹೆಚ್ಚಿನ ಅಧ್ಯಯನ ನಡೆಸಿ ೧೯೫೬ರಲ್ಲಿ "ಸ್ಟೋನ್ ಯೂಸಿಂಗ್ ಕಲ್ಚರ್ ಆಫ್ ಪ್ರೀ ಅಂಡ್ ಪ್ರೋಟೋ ಹಿಸ್ಟೋರಿಕ್ ಮೈಸೂರ್, ಲಂಡನ್ ಎಂಬುದರಲ್ಲಿ ದಾಖಲಿಸಿದರು.[೧೨] ಶ್ರೀಪಾದರಾವ್, ಅಲ್ಚಿನ್ ಬಿ.ರವರು ಈ ಪ್ರದೇಶದಲ್ಲಿ ಮತ್ತಷ್ಟು ಸಂಶೋಧನೆ ನಡೆಸಿದರು. ಅಲ್ಚಿನ್ ಅವರು ಕಿಬ್ಬನಹಳ್ಳಿಯಲ್ಲಿ ಹೆಚ್ಚಿನ ಅಧ್ಯಯನ ನಡೆಸಿ ಅಲ್ಲಿ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ನೆಲೆಗಳಿರುವುದನ್ನು ಪತ್ತೆ ಹಚ್ಚಿದರು. ನೂತನ ಶಿಲಾಯುಗದ ಎರಡು ಬೂದಿ ದಿಬ್ಬಗಳು ಪಾವಗಡ ತಾಲ್ಲೂಕಿನ ನಾಗಲಾಪುರ ಮತ್ತ ಕೊವಿಲಪಾಳ್ಯಂಗಳಲ್ಲಿ ಇರುವುದನ್ನು ಪಿ.ರಾಮರೆಡ್ಡಿ ಅವರು ಪತ್ತೆಹಚ್ಚಿದರು. ಯಲ್ಲಪ್ಪ ನಾಯಕನ ಹೊಸಕೋಟೆ ಬೆಟ್ಟದ

ಮೇಲಿನ ದೇವಾಲಯದಲ್ಲಿ ಸಂಗ್ರಹಿಸಿಡಲಾಗಿದ್ದ ನೂತನ ಶಿಲಾಯುಗದ ಬಗ್ಗೆ ಶ್ರೀವತ್ಸ ವರದಿ ಮಾಡಿದರು. ಇ.ಕೆ.ಶರ್ಮ ಜಲಗಾರದಿಬ್ಬ, ಗಂಗ್ಡಾನಹಳ್ಳಿ ಬೂದಿಣ್ಣೆ, ಹೆರೂರು ಬೂದಿಣ್ಣೆಯಲ್ಲಿದ್ದ ನೂತನ ಶಿಲಾಯುಧಗಳನ್ನು ಸಂಗ್ರಹಿಸಿ ವರದಿ ಮಾಡಿದರು.

ಬಿ.ಎಲ್.ರೈಸ್ ಬೆಳ್ಳಿಬಟ್ಟಲಹಳ್ಳಿಯಲ್ಲಿ ಹಾಳು ಮಾಡಲಾದ ಶಿಲಾಗೋರಿಗಳ ಬಗ್ಗೆ ಮೈಸೂರು ಪುರಾತತ್ವ ವಾರ್ಷಿಕಾಂಶದಲ್ಲಿ ಪ್ರಕಟಿಸಿದರು. ಎಚ್ .ಕೆ.ಸೆಟ್ಲರ್ ಅವರು ಕೇರಳಕಟ್ಟೆ(ತಿಪಟೂರು ತಾಲ್ಲೂಕು)ಯಲ್ಲಿ ದೊರೆತ ಬೃಹತ್ ಶಿಲಾಗೋರಿಗಳ ಬಗೆಗೆ ವಿವರಣೆ ನೀಡಿದರು. ಕೆ.ವಿ.ರಾವ್, ಹಿರೇಗುಂಡಗಲ್ ನಲ್ಲಿ ದೊರೆತ ಶಿಲಾಸಂಸ್ಕೃತಿಯ ಮಡಕೆಗಳ ಬಗ್ಗೆ ಇಂಡಿಯನ್ ಅಂಟಿಕ್ವೇರಿ (೧೯೭೮-೭೯)ಯಲ್ಲಿ ಪ್ರಕಟಿಸಿದರು. ವಿ.ಆರ್ .ಚೆಲುವರಾವ್ ಅವರು ಬಸವನಬೆಟ್ಟ, ಕಣಿಕಲ್ ಬಂಡೆ, ತಪ್ಪಾಗಾನದೊಡ್ಡಿ, ಪಳವಳ್ಳಿಗಳಲ್ಲಿ ಬೃಹತ್ ಶಿಲಾಯುಗದ ವೃತ್ತಾಕಾರದ ಗೋರಿಗಳಿರುವ ಬಗ್ಗೆ ತಮ್ಮ ಕಿರುಹೊತ್ತಿಗೆ 'ಪಾವಗಡ ತಾಲ್ಲೂಕು ದರ್ಶನ'ದಲ್ಲಿ ಉಲ್ಲೇಖಿಸಿದ್ದಾರೆ. ಹೊಳಕಲ್ಲು ಬೆಟ್ಟದಲ್ಲಿ ಇತಿಹಾಸ ಆರಂಭಕಾಲದ ಹಲವಾರು ಅವಶೇಷಗಳನ್ನು ಸಾಂಬಶಿವ ಐಯ್ಯರ್ ಅವರು ಸಂಗ್ರಹಸಿಕೊಟ್ಟಿದ್ದನ್ನು ರಾಬರ್ಟ್‌ಬ್ರೂಸ್ ಪೂಟ್ ಕೂಲಂಕುಶವಾಗಿ ಅಧ್ಯಯನ ನಡೆಸಿದರು. ಕೆ.ಬಿ.ಶಿವತಾರಕ್ ಅವರು ತುಮಕೂರು ಪ್ರದೇಶದಲ್ಲಿ ವ್ಯಾಪಕ ಕ್ಷೇತ್ರಕಾರ್ಯ ನಡೆಸಿ ಸುಮಾರು ೨೪೬ ಪ್ರಾಗೈತಿಹಾಸಿಕ ನೆಲೆಗಳನ್ನು ಶೋಧಿಸಿರುವುದು ಅವರ 'ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು' ಎಂಬ ಮಹಾಪ್ರಬಂಧದಿಂದ ತಿಳಿಯುತ್ತದೆ.[೧೩] ಸೂಕ್ಷ್ಮ ಶಿಲಾಯುಗ ಅಥವಾ ಲೋಹಯುಗದಲ್ಲಿ ಆದಿಮಾನವ ಸಂಸ್ಕೃತಿ ನಾಗರಿಕತೆಯತ್ತ ಸಾಗಿರುವುದು ಅವರು ಬಳಸುವ ಬಟ್ಟಲು, ಪಾತ್ರೆಗಳು, ಕುಂಬಗಳು ಮುಂತಾದವುಗಳಿಂದ ನಿರ್ಧರಿಸಲಾಗಿದೆ ಎಂದು ಆರ್.ಆರ್.ದಿವಾಕರ ಅವರು ಹೇಳಿದ್ದಾರೆ.[೧೪] ಕಿನ್ಸಿಯಡ್ ಲೀ ಅವರು ಮೀನಾಕ್ಷಯ್ಯ ಎಸ್ಟೇಟ್ ಪ್ರದೇಶದಲ್ಲಿ ಸೂಕ್ಷ್ಮ ಶಿಲಾಯುಧವನ್ನು ಶೋಧಿಸಿದರು. ರಾಬಸ್ ಬ್ರೂಸ್ ಪೂಟ್ ರವರು ಇದರ ಬಗ್ಗೆ ಹೆಚ್ಚಿನ ಅಧ್ಯಯನ ನಡೆಸಿದರು. ಅಲ್ಚಿನ್‌ರವರು ಕಿಬ್ಬನಹಳ್ಳಿ ಪ್ರದೇಶದಲ್ಲಿ ಅಧ್ಯಯನ ನಡೆಸುತ್ತಿರುವಾಗ ಸೂಕ್ಷ್ಮ ಶಿಲಾಯುಗ ಅವಶೇಷಗಳನ್ನು ಪತ್ತೆ ಹಚ್ಚಿದರು. ಇದರಿಂದಾಗಿ ಕಿಬ್ಬನಹಳ್ಳಿ ಕರ್ನಾಟಕದ ಪ್ರಾಗೈತಿಹಾಸಿಕ ದೃಷ್ಟಿಯಿಂದ ಗಮನಾರ್ಹ ನೆಲೆಯಾಗಿ ಕಂಡುಬಂದಿತು.[೧೫]

ತುಮಕೂರು ಪ್ರದೇಶದಲ್ಲಿ ಗಂಗರಸರ ಆಡಳಿತದಿಂದ ರಾಜಕೀಯ ಚರಿತ್ರೆ ಪ್ರಾರಂಭವಾಗಿದೆ. ಬಿ.ಎಲ್.ರೈಸ್, ಎಂ.ಶೇಷಾದ್ರಿಯವರು ಇವರ ಶಾಸನಗಳನ್ನು ಪತ್ತೆಹಚ್ಚಿ ಅಧ್ಯಯನ ನಡೆಸಿದ್ದಾರೆ. ಬಿ.ಎಲ್.ರೈಸ್ ಸುಮಾರು ೭೦ ಗಂಗರ ಶಾಸನಗಳನ್ನು ಸಂಶೋಧಿಸಿ ಅವರ ಆಡಳಿತದ ಬಗ್ಗೆ ವಿವರಣೆ ನೀಡಿದ್ದಾರೆ. ಶ್ರೀಪುರುಷನ ಕಾಲದಲ್ಲಿ ತುಮಕೂರು ಪ್ರದೇಶ ಗಂಗರಾಜ್ಯಕ್ಕೆ ಒಳಪಟ್ಟಿತ್ತು. ಇವರ ಸಮಕಾಲೀನರಾದ ರಾಷ್ಟ್ರಕೂಟರು ಗಂಗರಸರನ್ನು ಸೋಲಿಸುವುದರ ಮೂಲಕ ತುಮಕೂರು ಪ್ರದೇಶದಲ್ಲಿ ರಾಷ್ಟ್ರಕೂಟರ ಆಡಳಿತ ನೆಲೆಸಿತು.[೧೬] ನಂತರ ಕಲ್ಯಾಣದ ಚಾಲುಕ್ಯರು ಈ ಭಾಗದಲ್ಲಿ ಆಡಳಿತ

ನಡೆಸಿರುವುದು ಶಾಸನಗಳಿಂದ ತಿಳಿಯುತ್ತದೆ. ಚೋಳರು ನಿಡುಗಲ್ಲನ್ನು ರಾಜಧಾನಿಯಾಗಿ ಮಾಡಿಕೊಂಡು ತುಮಕೂರು ಪ್ರದೇಶದ ಬಹುಭಾಗವನ್ನು ಆಳಿರುವುದು ತಿಳಿದುಬರುತ್ತದೆ.

ಕ್ರಿ.ಶ.೧೨ನೇ ಶತಮಾನದಲ್ಲಿ ಹೊಯ್ಸಳರು ಪ್ರಬಲರಾಗಿ ತುಮಕೂರು ಪ್ರದೇಶವನ್ನು ಆಡಳಿತ ಮಾಡುತ್ತಿದ್ದ ಚೋಳರನ್ನು ಸೋಲಿಸುತ್ತಾರೆ. ಇದರೊಂದಿಗೆ ತುಮಕೂರು ಪ್ರದೇಶದ ಮಧ್ಯಕಾಲೀನ ಚರಿತ್ರೆ ಪ್ರಾರಂಭವಾಗುತ್ತದೆ. ಈ ಮನೆತನದ ಪ್ರಸಿದ್ಧ ದೊರೆ ವಿಷ್ಣುವರ್ಧನನ ಕಾಲದಲ್ಲಿ ತುಮಕೂರು ಪ್ರದೇಶದ ಬಹುಭಾಗ ಹೊಯ್ಸಳ ರಾಜ್ಯಕ್ಕೆ ಸೇರಿತ್ತು. ಇವನು ಚೋಳರು ಮತ್ತು ನೊಳಂಬರನ್ನು ಸೋಲಿಸಿ ಈ ಭಾಗದಲ್ಲಿ ಅಧಿಪತ್ಯ ಸ್ಥಾಪಿಸಿರುವುದು ತಿಳಿಯುತ್ತದೆ.[೧೭] ನಂತರ ವಿಜಯನಗರದ ಅರಸರು, ಮೊಗಲರು, ಮರಾಠರ ಆಳ್ವಿಕೆಯೊಂದಿಗೆ ಮಧ್ಯಕಾಲೀನ ಚರಿತ್ರೆ ಮುಕ್ತಾಯಗೊಳ್ಳುತ್ತದೆ.

೧೯ನೇ ಶತಮಾನದ ವೇಳೆಗೆ ವಸಾಹತುಶಾಹಿಗಳಲ್ಲಿಯೆ ಪ್ರಬಲರಾಗಿದ್ದ ಬ್ರಿಟಿಷರು ಮೈಸೂರು ರಾಜ್ಯದ ಹೈದರಾಲಿ ಮತ್ತು ಟಿಪ್ಪುಸುಲ್ತಾನನ ವಿರುದ್ಧ ಸ್ಥಳೀಯರನ್ನು ಎತ್ತಿಕಟ್ಟಿ ಸೆಣಸಾಡಿದರು. ೧೭೯೧ರಲ್ಲಿ ನಡೆದ ಮೂರನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಲಾರ್ಡ್ ಕಾರನ್‌ವಾಲೀಸ್ ಟಿಪ್ಪುವನ್ನು ಸೋಲಿಸಿದನು. ನಂತರ ನಡೆದ ಶ್ರೀರಂಗಪಟ್ಟಣ ಒಪ್ಪಂದದಂತೆ ತುಮಕೂರು ಮೈಸೂರು ರಾಜ್ಯದ ಒಂದು ಭಾಗವಾಯಿತು.[೧೮] ಇದರಿಂದ ತುಮಕೂರು ಚರಿತ್ರೆಯಲ್ಲಿ ಹೊಸ ಆಯಾಮವುಂಟಾಯಿತು. ೧೭೯೯ರಲ್ಲಿ ನಡೆದ ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ದದಲ್ಲಿ ಟಿಪ್ಪುವಿನ ಸೋಲಿನೊಂದಿಗೆ ಮೈಸೂರು ರಾಜ್ಯ ಬ್ರಿಟಿಷರ ಆಡಳಿತದ ತೆಕ್ಕೆಗೆ ಒಳಗಾಯಿತು. ಅವರ ಅದಿಪತ್ಯ ತುಮಕೂರು ಪ್ರದೇಶಕ್ಕೂ ವಿಸ್ತರಿಸಿತು. ೧೯೨೦ ನಂತರ ತುಮಕೂರು ಪ್ರದೇಶದಲ್ಲಿ ಸ್ವಾತಂತ್ರ್ಯ ಹೋರಾಟಗಳು ಪ್ರಾರಂಭವಾಗುತ್ತವೆ. ತುಮಕೂರು ನಗರದಲ್ಲಿ ಕಾಂಗ್ರೆಸ್ ಸಮಿತಿ ರಚನೆಗೊಂಡು ಕಾರ್ಯತತ್ಪರವಾಯಿತು.[೧೯] ೧೯೨೭ರಲ್ಲಿ ಗಾಂದೀಜಿಯವರು ತುಮಕೂರು ಪ್ರದೇಶದಲ್ಲಿ ಪ್ರವಾಸ ಕೈಗೊಂಡು ಖಾದಿ ಪ್ರಚಾರ, ಹರಿಜನೋದ್ಧಾರ ಮುಂತಾದ ರಚನಾತ್ಮಕ ಕಾರ್ಯಕೈಗೊಂಡರು.[೨೦] ೧೯೩೦ರಲ್ಲಿ ಗಾಂಧೀಜಿಯವರು ಕರೆ ನೀಡಿದ ಕಾನೂನು ಭಂಗ ಚಳುವಳಿಗೆ ಬೆಂಬಲವಾಗಿ ತುಮಕೂರು ಪ್ರದೇಶದಲ್ಲಿ ಪಾನನಿರೋಧ, ಅರಣ್ಯ ಸತ್ಯಾಗ್ರಹದಂತಹ ಚಳುವಳಿಗಳು ನಡೆದವು. ೧೯೩೮ರಲ್ಲಿ ನಡೆದ ಶಿವಪುರ ಧ್ವಜ ಸತ್ಯಾಗ್ರಹ, ವಿದುರಾಶ್ವತ್ಥ ಧ್ವಜ ಸತ್ಯಾಗ್ರಹದಲ್ಲಿ ತುಮಕೂರು ಜಿಲ್ಲೆಯ ಕೆಲವು ನಾಯಕರು ಭಾಗವಹಿಸುವುದರ ಮೂಲಕ ಬೆಂಬಲವು ವ್ಯಕ್ತಪಡಿಸಿದರು.[೨೧] ಇದಾದ ನಂತರ ನಡೆದ ಕ್ವಿಟ್ ಇಂಡಿಯಾ ಮತ್ತು ಮೈಸೂರು ಚಲೋ ಚಳುವಳಿಗಳು ತುಮಕೂರು ಪ್ರದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಹೊಸ ಆಯಾಮ ಒದಗಿಸಿದಂತಾಯಿತು. ಕರ್ನಾಟಕ ಏಕೀಕರಣ ಚಳುವಳಿಯ ಕಾಲಘಟ್ಟದಲ್ಲಿ ತುಮಕೂರು ಪ್ರದೇಶದ ಪಾತ್ರವನ್ನು ಕುರಿತು ವಿವರಿಸುವಲ್ಲಿ ಈ ಪ್ರದೇಶವು ಮೈಸೂರು ಸಂಸ್ಥಾನದ ಒಂದು ಭಾಗವಾಗಿದ್ದರಿಂದ ಏಕೀಕರಣದ ಬಗ್ಗೆ ಸಂಸ್ಥಾನ ತಳೆದ ನಿಲುವುಗಳೇ ಅನ್ವಯವಾಗಿರುವುದರಿಂದ ಮೈಸೂರು ಸಂಸ್ಥಾನ ಮತ್ತು ಏಕೀಕರಣ ಸಂಬಂಧ ಕುರಿತು ಬಂದ ಕೃತಿಗಳನ್ನು ಅಧ್ಯಯನ ಮಾಡಲಾಗಿದೆ.

## ಅಡಿಟಿಪ್ಪಣಿ

೧. ಕಾಲಿಂಗ್‌ವುಡ್ ಆರ್.ಜಿ., ದಿ ಐಡಿಯಾ ಆಫ್ ಹಿಸ್ಟರಿ, ಕ್ಲಾರಿನ್‌ಡನ್ ಪ್ರೆಸ್, ಆಕ್ಸ್‌ಫರ್ಡ್, ೧೯೯೩, ಪು.೧

೨. ಕಾರ್ ಇ.ಎಚ್., ವಾಟ್ ಈಸ್ ಹಿಸ್ಟರಿ, ಮ್ಯಾಕ್‌ಮಿಲನ್, ಲಂಡನ್, ೧೯೯೩, ಪು.೨೦, ೨೧

೩. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೧, ೨

೪. ಅದೇ, ಪು.೪

೫. ಅದೇ, ಪು.೫, ೮

೬. ರಾಜಾರಾಮ ಹೆಗಡೆ(ಸಂ), ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪, ಪು.xiii

೭. ಮೋಹನ್‌ಕೃಷ್ಣ ರೈ ಕೆ., ಪೂರ್ವೋಕ್ತ, ೨೦೦೪, ಪು.೮

೮. ರಾಜಾರಾಮ ಹೆಗಡೆ, ಪೂರ್ವೋಕ್ತ, ೨೦೦೪, ಪು.xiii, xiv

೯. ಲಕ್ಷ್ಮಣ್ ತೆಲಗಾವಿ(ಸಂ), ಸ್ಥಳೀಯ ಚರಿತ್ರೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩, ಪು.೬

೧೦. ಲಕ್ಷ್ಮಣ ಸಿ.ಎಂ., ತುಮಕೂರು ಜಿಲ್ಲೆಯ ಭೌಗೋಳಿಕ ಲಕ್ಷಣಗಳು, ದರ್ಶನ ಪ್ರಕಾಶನ, ಬೆಂಗಳೂರು, ೨೦೦೦, ಪು.೧

೧೧. ಶಿವತಾರಕ್ ಕೆ.ಬಿ., ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು, ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಮಹಾಪ್ರಬಂಧ, ೧೯೯೯, ಪು.೫

೧೨. ಷೇಕ್ ಅಲಿ ಬಿ., ಕರ್ನಾಟಕ ಚರಿತ್ರೆ ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೯

೧೩. ಶಿವತಾರಕ್ ಕೆ.ಬಿ., ಪೂರ್ವೋಕ್ತ, ೧೯೯೯, ಪು.೧೪-೧೫

೧೪. ದಿವಾಕರ ಆರ್.ಆರ್., ಕರ್ನಾಟಕ ಪರಂಪರೆ ಸಂಪುಟ ೧, ಸಾಹಿತ್ಯ ಸಂಸ್ಕೃತಿ ಇಲಾಖೆ, ಮೈಸೂರು, ೧೯೭೦, ಪು.೧೦೮

೧೫. ಶಿವತಾರಕ್ ಕೆ.ಬಿ., ಪೂರ್ವೋಕ್ತ, ೧೯೯೯, ಪು.೧೦

೧೬. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ.ಎಂ, ಕರ್ನಾಟಕ ಇತಿಹಾಸ ದರ್ಶನ, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು, ೧೯೭೦, ಪು.೧೦೧, ೧೧೦

೧೭. ರೈಸ್ ಬಿ.ಎಲ್., ಎಪಿಗ್ರಾಫಿಯಾ ಕರ್ನಾಟಿಕ ೧೨, ತುಮಕೂರು, ಪು.೯

೧೮. ನಾಯಕ ಹಾ.ಮಾ., **ಕನ್ನಡ ವಿಶ್ವಕೋಶ**, ಸಂಪುಟ ೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೨, ಪು.೪೨೮

೧೯. ಭಾಸ್ಕರಪ್ಪ ಸಿ.ಎನ್.(ಸಂ), **ತುಮಕೂರು ಜಿಲ್ಲಾ ದರ್ಶನ**, ಟೈಮ್ಸ್ ಪಬ್ಲಿಕೇಷನ್ಸ್, ತುಮಕೂರು, ೧೯೮೧, ಪು.೬೨

೨೦. ಸೂರ್ಯನಾಥ ಕಾಮತ್(ಸಂ), **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು**, ಸಂಪುಟ ೨, ಗೀತಾಬುಕ್ ಹೌಸ್, ಮೈಸೂರು, ೧೯೭೭

೨೧. ಅದೇ, ಪು.೪೨೮

# ೨

# ವಸಾಹತುಪೂರ್ವ ಚಾರಿತ್ರಿಕ ಕೃತಿಗಳ ಅವಲೋಕನ

ಚರಿತ್ರೆ ಲೇಖನ ಶಾಸ್ತ್ರವು ಆಧುನಿಕ ಯುಗದಲ್ಲಿ ಹೆಚ್ಚು ಮಹತ್ವ ಪಡೆದಿದೆ. ಅದರ ವಿವಿಧ ಆಯಾಮಗಳು ಮತ್ತು ಅವುಗಳ ವೈಶಿಷ್ಟ್ಯಗಳು ಬೆಳವಣಿಗೆಯಾಗಲು ವಸಾಹತುಕಾಲ ಉತ್ತಮ ಅವಕಾಶಗಳನ್ನು ಮತ್ತು ವಿದ್ವಾಂಸರುಗಳಿಗೆ ನವ ವಿಚಾರ ಶಕ್ತಿಯನ್ನು ಹೊಂದಲು ಪ್ರೇರಣೆಯನ್ನು ನೀಡಿತು. ಇದರ ಹಿನ್ನೆಲೆಯಲ್ಲಿ ಪ್ರಾಚೀನ ಚರಿತ್ರೆ ಮತ್ತು ಮಧ್ಯಕಾಲೀನ ಚರಿತ್ರೆಗಳು ವಿಶ್ಲೇಷಣೆಗೆ ಒಳಗಾದವು. ಈ ಸೈದ್ಧಾಂತಿಕ ವಿಶ್ಲೇಷಣೆಯು ವಸಾಹತುಪೂರ್ವ ಕಾಲದ ಚಾರಿತ್ರಿಕ ವಿವರಗಳನ್ನು ಹೊಂದಿರುವುದರಿಂದ ಅದಕ್ಕೆ ವಸಾಹತುಪೂರ್ವ ಚರಿತ್ರೆ ಎಂಬುದಾಗಿ ಉಲ್ಲೇಖಿಸಲಾಗಿದೆ. ಇದಕ್ಕೆ ಸಂಬಂಧಿಸಿದ ಕೃತಿಗಳನ್ನು ಅವಲೋಕಿಸಿ ಅಧ್ಯಯನವನ್ನು ಸರಳಗೊಳಿಸುವ ಸಲುವಾಗಿ ಪ್ರಾಚೀನ ಚರಿತ್ರೆ ಎಂದು ವಿಭಾಗಿಸಿ ಅದರಲ್ಲಿ ಪ್ರಾಗೈತಿಹಾಸಿಕ ಯುಗದ ಚರಿತ್ರೆ ಅಧ್ಯಯನ ಮಾಡಿದ ನಂತರ ಸಾಮ್ರಾಜ್ಯಗಳ ಬೆಳವಣಿಗೆಯನ್ನು ಗಂಗರ ಆಡಳಿತದಿಂದ ಚೋಳರ ಆಡಳಿತದವರೆಗೆ ವಿವರಿಸಿ ಅದನ್ನು ಪ್ರಾಚೀನ ಚರಿತ್ರೆ ಎಂಬುದಾಗಿ ಗುರುತಿಸಲಾಗಿದೆ. ನಂತರ ಹೊಯ್ಸಳರ ಆಳ್ವಿಕೆಯಿಂದ ಪಾಳೆಯಗಾರರ ಹಾಗೂ ಮೈಸೂರು ಒಡೆಯರ ಆಡಳಿತದವರೆಗಿನ ಚರಿತ್ರೆಯನ್ನು ಮಧ್ಯಕಾಲೀನ ಚರಿತ್ರೆ ಎಂಬುದಾಗಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ.

## ೨.೧. ಪ್ರಾಚೀನ ಚರಿತ್ರೆ

ತುಮಕೂರು ಪ್ರದೇಶದ ಪ್ರಾಚೀನ ಚರಿತ್ರೆಯು ಕರ್ನಾಟಕ ಚರಿತ್ರೆ ಹಾಗೂ ದಕ್ಷಿಣ ಭಾರತದ ಚರಿತ್ರೆಯಲ್ಲಿ ಮಹತ್ತರ ಸ್ಥಾನ ಪಡೆದಿದೆ. ಈ ಭಾಗದಲ್ಲಿ ಪ್ರಾಗೈತಿಹಾಸಿಕ ಶಿಲಾಯುಗ ಮಾನವನ ಕುರುಹುಗಳು, ಪ್ರಾಚೀನ ಮತ್ತು ಮಧ್ಯಕಾಲೀನ ಅವಧಿಯ ರಾಜವಂಶಗಳ ರಾಜಕೀಯ ಚಟುವಟಿಕೆಗಳು ನಡೆದು ಆಂಧ್ರ ಪ್ರದೇಶ, ತಮಿಳುನಾಡಿನ ರಾಜವಂಶಗಳನ್ನು ತನ್ನತ್ತ ಸೆಳೆಯುವುದರ ಮೂಲಕ ಕನ್ನಡ ನಾಡಿನೊಳಗೆ ಸಂಪರ್ಕ ಕಲ್ಪಿಸಿವೆ. ಇಂತಹ ಪ್ರದೇಶದಲ್ಲಿನ ಚರಿತ್ರೆಯನ್ನು ಅಧ್ಯಯನ ಮಾಡುವಾಗ, ಅಧ್ಯಯನ ಸುಲಭಗೊಳಿಸುವ ಸಲುವಾಗಿ ಎರಡು ಭಾಗಗಳಾಗಿ ಮಾಡಲಾಗಿದೆ. ತುಮಕೂರು ಪ್ರದೇಶದ ಚರಿತ್ರೆಯನ್ನು ಶಿಲಾಯುಗದಿಂದ ಆರಂಭಿಸಿದ್ದು, ಶಿಲಾಯುಗ ಮಾನವನ ನೆಲೆಗಳು ಹಾಗೂ ಸಾಂಸ್ಕೃತಿಕ ಪ್ರಸರಣ ಕುರಿತು ವಿಶ್ಲೇಷಿಸಲಾಗಿದೆ. ಎರಡನೆಯ ಭಾಗದಲ್ಲಿ ವಿವಿಧ ರಾಜಮನೆತನಗಳ ಆಳ್ವಿಕೆಯನ್ನು ಕುರಿತು ವಿಶ್ಲೇಷಿಸಲಾಗಿದೆ.

## ಶಿಲಾಯುಗ

ಬರವಣಿಗೆಯು ಉಪಯೋಗಕ್ಕೆ ಬರುವ ಪೂರ್ವದಲ್ಲಿಯ ಮಾನವ ಸಂಸ್ಕೃತಿಯ ಕಾಲವನ್ನು 'ಪ್ರಾಗೈತಿಹಾಸಕಾಲ' ಎಂದೂ, ಬರವಣಿಗೆ ಉಪಯೋಗವಾದಂದಿನಿಂದ 'ಇತಿಹಾಸ ಕಾಲ' ಎಂದು ಗುರುತಿಸಲಾಗಿದೆ. ಹಿಂದೆ ಕೆಲವು ಆಕಸ್ಮಿಕ ಶೋಧಗಳಿಂದ ದೊರೆತ ಪ್ರಾಗೈತಿಹಾಸಕಾಲದ ನೆಲೆಗಳನ್ನು ಮತ್ತು ಅವಶೇಷಗಳನ್ನು ಪ್ರಾಕ್ತನ ಶಾಸ್ತ್ರಜ್ಞರು ಪತ್ತೆ ಹಚ್ಚಿ ಪರೀಕ್ಷಿಸಿ ಮಾನವನ ಜೀವನ ಕ್ರಮ ಮತ್ತು ಬೆಳವಣಿಗೆಯ ಹಂತಗಳನ್ನು ಗುರುತಿಸಿದ್ದಾರೆ.[೧] ಈ ಪ್ರಾಚೀನ ನೆಲೆಗಳನ್ನು ಅಲ್ಲಿ ದೊರೆತಿರುವ ಶಿಲಾಯುಧಗಳ ಸಹಾಯದಿಂದ ಪತ್ತೆಹಚ್ಚಿರುವುದು ಸ್ಪಷ್ಟವಾಗಿದೆ. ಇತ್ತೀಚೆಗೆ ಆಫ್ರಿಕಾದಲ್ಲಿ ನಡೆಸಿದ ಪ್ರಾಚೀನ 'ಮಾನವ ಶಾಸ್ತ್ರೀಯ' ಸಂಶೋಧನೆಗಳ ಪ್ರಕಾರ ಮಾನವನ ಪ್ರಾಚೀನತೆ ೩.೫.ಮಿಲಿಯಂನಿಂದ ೪ ಮಿಲಿಯಂನಷ್ಟು ಹಿಂದಕ್ಕೆ ಹೋಗುತ್ತದೆ. ಭಾರತದ ಪ್ರಸಿದ್ಧ ಭೂಗರ್ಭ ಶಾಸ್ತ್ರಜ್ಞರಾದ ರಾಬರ್ಟ್ ಬ್ರೂಸ್‌ಫೂಟ್‌ರವರು ೧೮೬೩ರಲ್ಲಿ ಚನ್ನೈ ಬಳಿಯ ಪಲ್ಲಾವರಮ್‌ನಲ್ಲಿ ಪ್ರಾಚೀನ ಶಿಲಾಯುಗಕ್ಕೆ ಸಂಬಂಧಿಸಿದ ಉಪಕರಣವೊಂದನ್ನು ಪ್ರಥಮ ಬಾರಿಗೆ ಪತ್ತೆಹಚ್ಚಿದರು.[೨] ಇದು ಅನಂತರ ಬೇರೆ ಬೇರೆ ಪುರಾತತ್ವಶಾಸ್ತ್ರಜ್ಞರು ಹೆಚ್ಚಿನ ಅಧ್ಯಯನಕ್ಕೆ ತೊಡಗಲು ಪ್ರೇರಣೆಯಾಯಿತು.

ಕರ್ನಾಟಕದ ಪ್ರಾಗೈತಿಹಾಸಿಕ ಚರಿತ್ರೆಯಲ್ಲಿ ಪ್ರಿಮ್ ರೋಸ್ ರವರು ಲಿಂಗಸೂರು(ರಾಯಚೂರು) ಪ್ರದೇಶದಲ್ಲಿ ಆಕಸ್ಮಿಕವಾಗಿ ಶೋಧಿಸಿದ ಶಿಲಾ ಉಪಕರಣಗಳೇ ಮೊದಲನೆಯದು ನಂತರ ಕರ್ನಲ್ ಮೆಕೆಂಜಿ ಸಂಶೋಧನೆಯಲ್ಲಿ ಹೊಸ ನೆಲೆಗಳನ್ನು ಪತ್ತೆಹಚ್ಚಿದರು, "ಭಾರತೀಯ ಪ್ರಾಗೈತಿಹಾಸ ಸಂಶೋಧನೆ ಮತ್ತು ಅಧ್ಯಯನಗಳ ಪಿತಾಮಹ" ಎನಿಸಿದ ರಾಬರ್ಟ್ ಬ್ರೂಸ್ ಫೂಟ್‌ರವರು ೧೮೬೩ ರಿಂದ ೧೯೦೪ರ ಅವಧಿಯ ತಮ್ಮ ಸಂಶೋಧನಾ ಕಾರ್ಯದಲ್ಲಿ ಪ್ರಾಗೈತಿಹಾಸಕಾಲ ಮತ್ತು ಇತಿಹಾಸ ಆರಂಭಕಾಲಕ್ಕೆ ಸಂಬಂಧಿಸಿದ ಒಟ್ಟು ೪೫೯ ನೆಲೆಗಳನ್ನು ಶೋಧಿಸಿದರು[೩] ಎಂದು ಕೆ.ಬಿ.ಶಿವತಾರಕ್ ತಿಳಿಸಿದ್ದಾರೆ.

ಯಾವುದೇ ಪ್ರದೇಶ ಚರಿತ್ರೆ ಪ್ರಾರಂಭ ಕಾಣುವ ಮುನ್ನ ಆ ಪ್ರದೇಶದಲ್ಲಿ ಶಿಲಾಯುಗ ಕುರುಹುಗಳು ಕಂಡುಬರುವುದು ಸಹಜ, ಇಂತಹ ಪ್ರದೇಶಗಳು ಜನವಸತಿಗೆ ಯೋಗ್ಯವಾಗಿದ್ದು, ಕಾಲಕ್ರಮೇಣ ಅಲ್ಲಿಯೇ ಚರಿತ್ರೆ ಆರಂಭವಾಗುತ್ತದೆ. ಶಿಲಾಯುಗದ ಪುರಾವೆಗಳು ಕಂಡುಬರುವ ಪ್ರದೇಶಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ. ಶಿಲಾಯುಗ ಚರಿತ್ರೆಯನ್ನು ಹಳೆಶಿಲಾಯುಗ, ಮಧ್ಯಶಿಲಾಯುಗ, ನೂತನ ಶಿಲಾಯುಗ, ಸೂಕ್ಷ್ಮ ಶಿಲಾಯುಗ ಅಥವಾ ಲೋಹಯುಗ, ಬೃಹತ್ ಕಬ್ಬಿಣ ಯುಗ ಎಂಬುದಾಗಿ ವಿಭಾಗಿಸಿ ಅಧ್ಯಯನ ಮಾಡಲಾಗಿದೆ.

ಕ್ರಿ.ಶ.೧೯೫೬-೫೭ರಿಂದ ಕೇಂದ್ರ ಸರ್ಕಾರದ ಪುರಾತತ್ವ ಸರ್ವೇಕ್ಷಣ ಇಲಾಖೆಯ ಪ್ರಯತ್ನದಿಂದ ಪ್ರತಿಯೊಂದು ಹಳ್ಳಿಯಲ್ಲಿ ಇರುವಂತಹ ಎಲ್ಲಾ ಶಿಲಾಯುಗದ ಪ್ರಕಾರಗಳನ್ನು ಸಂಶೋಧನೆಗೆ

ಒಳಪಡಿಸಿದೆ.[೪] ಇದರಿಂದಾಗಿ ತುಮಕೂರು ಪ್ರದೇಶದ ಶಿಲಾಯುಗದ ವಿವರಗಳನ್ನು ತಿಳಿಯಲು ಸಾಧ್ಯವಾಯಿತು. ೨೦ನೆಯ ಶತಮಾನದಲ್ಲಿ ಈ ಭಾಗದ ಪುರಾತತ್ವ ಕುರುಹುಗಳ ಬಗ್ಗೆ ಹೆಚ್ಚಿನ ಸಂಶೋಧನೆ ನಡೆಯಿತು. ಈ ಪ್ರಯತ್ನದಲ್ಲಿ ಆಂಗ್ಲ ವಿದ್ವಾಂಸರಾದ ರಾಬರ್ಟ್ ಬ್ರೂಸ್ ಫೂಟ್ ರವರ ಪಾತ್ರ ಹಿರಿದಾದುದು. ಜೊತೆಗೆ ಅ.ಸುಂದರ, ಸಂಪತ್ ಐಯ್ಯಾಂಗಾರ್, ಎಂ.ಶ್ರೇಷಾದ್ರಿ, ಎಸ್.ಶ್ರೀಕಂಠಶಾಸ್ತ್ರಿ ಬಿ.ನರಸಿಂಹಯ್ಯ, ಸಿ. ಕೃಷ್ಣಮೂರ್ತಿ, ಅಲ್ಚಿನ್, ಬಿ.ಶ್ರೀಪಾದರಾವ್ ಮೊದಲಾದವರು ಶ್ರಮಿಸಿದ್ದಾರೆ. ಇವರ ದಾಖಲೆಗಳನ್ನು ಆದರಿಸಿ ಹಲವು ಚಾರಿತ್ರಿಕ ಕೃತಿಗಳು ವಿವರಣೆ ಒದಗಿಸಿವೆ. ಕೆ.ಬಿ.ಶಿವತಾರಕ್ ರವರ 'ತುಮಕೂರು ಜಿಲ್ಲೆಯ ಪುರತತ್ವ ಕುರುಹುಗಳು' ಮಹಾಪ್ರಬಂಧ ಸೂಕ್ತ ವಿವರಣೆ ಹೊಂದಿದೆ. ಬಿ.ಷೇಕ್ ಅಲಿರವರ 'ಕರ್ನಾಟಕ ಚರಿತ್ರೆ,' ಸಂಪುಟ ೧, ಶ್ರೀನಿವಾಸ ಪಾಡಿಗಾರರವರ 'ಪುರಾತತ್ವಶಾಸ್ತ್ರ ಪರಿಚಯ', ಶಂಕರ ನಾರಾಯಣರಾವ್‌ರವರ 'ಪ್ರಾಚೀನ ಭಾರತ', ಕೆ.ಅಭಿಶಂಕರರವರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್', ಕೆ.ಬಿ.ಶಿವತಾರಕ್‌ರವರ 'ಕರ್ನಾಟಕದ ಪುರಾತತ್ವ ನೆಲೆಗಳು', ಆರ್.ಆರ್.ದಿವಾಕರ್‌ರವರ 'ಕರ್ನಾಟಕ ಪರಂಪರೆ', ಸಂಪುಟ ೧, ಅ.ಸುಂದರರವರ 'ಕರ್ನಾಟಕ ಪ್ರಾಗೈತಿಹಾಸ, ಪ್ರಾಚ್ಯವಸ್ತು ಸಂಶೋಧನೆ', ಎಂ.ಎಚ್.ಕೃಷ್ಣರವರ 'ಕರ್ನಾಟಕ ಪೂರ್ವಚರಿತ್ರೆ', ಹಾಗೂ ಪಿ.ವಿ.ಕೃಷ್ಣಮೂರ್ತಿರವರ ಸಂಪಾದನದ 'ಸೂರ್ಯಕೀರ್ತಿ' ಅಭಿನಂದನಾ ಗ್ರಂಥ ಮೊದಲಾದವುಗಳಲ್ಲಿ ಉಲ್ಲೇಖಿತವಾಗಿದೆ. ಈ ಕೃತಿಗಳ ಅಧ್ಯಯನದಿಂದ ತುಮಕೂರು ಪ್ರದೇಶದ ಚರಿತ್ರೆಯನ್ನು ನಿರ್ಮಿಸುವ ಪ್ರಯತ್ನವನ್ನು ಮಾಡಲಾಗಿದೆ.

## ಹಳೆ ಶಿಲಾಯುಗ

ಶಿಲಾಯುಗದ ಪ್ರಾರಂಭಿಕ ಹಂತವನ್ನು ಹಳೆ ಶಿಲಾಯುಗವೆಂದು ಕರೆಯುತ್ತಾರೆ.[೫] ಇದು ಮಾನವನ ಜೀವನ ಕ್ರಮದ ಮೊದಲ ಹೆಜ್ಜೆಯಾಗಿದೆ. ಅ.ಸುಂದರ ಅವರ ಸಂಪಾದಕತ್ವದ 'ಕರ್ನಾಟಕ ಚರಿತ್ರೆ' ಸಂಪುಟ ೧ರಲ್ಲಿ ಆರ್.ಎಸ್.ಪುಷ್ಪರವರ ಲೇಖನ 'ಹಳೆಶಿಲಾಯುಗ ಮಾನವನ ವಿಕಾಸ'ದ ವಿವರಣೆ ನೀಡಿದೆ. ಇದರ ಪ್ರಕಾರ ಈ ಶಿಲಾಸಂಸ್ಕೃತಿಯನ್ನು ಆದಿ ಹಳೆ ಶಿಲಾಯುಗ, ಮಧ್ಯ ಹಳೆ ಶಿಲಾಯುಗ, ಅಂತ್ಯ ಹಳೆಶಿಲಾಯುಗ ಎಂದು ವಿಂಗಡಿಸಿ ಅಧ್ಯಯನ ನಡೆಸಲಾಗಿದೆ.[೬]

ಹಳೆಶಿಲಾಯುಗದ ಪುರಾವೆಗಳು ತುಮಕೂರು ಪ್ರದೇಶದಲ್ಲಿ ಲಭ್ಯವಾಗಿವೆ. ಕಿಬ್ಬನಹಳ್ಳಿ ಮತ್ತು ಬಿಳಿಗೆರೆ, ಬಾಣಸಂದ್ರ ಬೆಟ್ಟ ಪ್ರದೇಶದಲ್ಲಿ ಈ ಶಿಲಾಸಂಸ್ಕೃತಿ ನೆಲೆಗೊಂಡಿದ್ದನ್ನು ಸಂಪತ್ ಐಯ್ಯಾರ್ ಪತ್ತೆಹಚ್ಚಿ(೧೯೨೩) 'ಎ ಪಾಲಿಯೋಲಿಥಿಕ್ ಸೆಟಲ್ ಮೆಂಟ್ ಅಂಡ್ ಫ್ಯಾಕ್ಟರಿ ಇನ್ ದಿ ಮೈಸೂರ್ ಸ್ಟೇಟ್ ಎಂಬುದರಲ್ಲಿ ದಾಖಲಿಸಿದರು. ಇದನ್ನೆ ಎಂ.ಶೇಷಾದ್ರಿ ೧೯೫೬ರಲ್ಲಿ "ಸ್ಟೋನ್ ಯೂಸಿಂಗ್ ಕಲ್ಚರ್ ಆಫ್ ಪ್ರೀ ಅಂಡ್ ಪ್ರೋಟೋ ಹಿಸ್ಟೋರಿಕ್ ಮೈಸೂರ್" ಎಂಬುದರಲ್ಲಿ ದಾಖಲಿಸಿದರು[೭] ಎಂಬುದಾಗಿ ಕೆ.ಬಿ.ಶಿವತಾರಕ್ ಉಲ್ಲೇಖಿಸಿದ್ದಾರೆ.

ಈ ಯುಗದಲ್ಲಿ ಮಾನವನು ಅನಾಗರಿಕನಾಗಿ ಕಾಡುಜೀವನ ಮಾಡುತ್ತಿದ್ದು, ಆಹಾರ ಹುಡುಕಾಟದಲ್ಲಿ ತೊಡಗಿದ್ದನು. ಪ್ರಾಣಿಗಳ ಬೇಟೆಗಾಗಿ ಮತ್ತು ಗೆಡ್ಡೆ, ಗೆಣಸುಗಳನ್ನು ಅಗೆಯಲು ಹಾಗೂ ಪ್ರಾಣ ರಕ್ಷಣೆಗಾಗಿ ಕಲ್ಲಿನ ಆಯುಧಗಳನ್ನು ಬಳಸಿದನು. ಈ ಶಿಲಾಯುಧಗಳು ಅಂದಿನ ಮಾನವನ ಜೀವನ ಕ್ರಮವನ್ನು ತಿಳಿಯಲು ಸಹಾಯಕವಾಗಿವೆ. ಕೈಗೊಡಲಿಗಳು, ಸೀಳುಗತ್ತಿ, ಮಚ್ಚು, ಕೊರೆಗತ್ತಿ, ಚೂರಿ ತರಹದ ಚಕ್ಕೆಗಳು, ದುಂಡು ಚಪ್ಪಟೆ ಉಪಕರಗಳನ್ನು ಬಳಸಿದ್ದಾನೆ. ಈ ಎಲ್ಲಾ ಉಪಕರಣಗಳು ಹೆಚ್ಚಾಗಿ 'ಅಶೂಲ್' ಮಾದರಿಯಲ್ಲಿವೆ ಎಂದು ಶಿವತಾರಕ್ ತಿಳಿಸಿದ್ದಾರೆ.[೮] ಗವಿಗಳು, ಬೆಟ್ಟದ ತಪ್ಪಲಿನ ಕಲ್ಲುಬಂಡೆಗಳೇ ಆದಿಮಾನವನ ವಾಸಸ್ಥಾನಗಳಾಗಿದ್ದವು. ಈ ಶಿಲಾಸಂಸ್ಕೃತಿಯ ವೈವಿಧ್ಯಮಯ ಉಪಕರಣಗಳ ಸಹಾಯದಿಂದ ಅಲ್ಲಿನ ಪರಿಸರ ಅಧ್ಯಯನ, ನೀರಿನಾಸರೆ, ಪ್ರಾಣಿ ಸಂಕುಲದ ಬಗ್ಗೆ ತಿಳಿಯಲು ಸಹಾಯಕವಾಗಿದೆ. ಒಟ್ಟಾರೆ ತುಮಕೂರು ಪ್ರದೇಶದಲ್ಲಿ ಲಭ್ಯವಾಗಿರುವ ಪುರಾವೆಗಳಿಂದ ಹಳೆಶಿಲಾಯುಗ ಸಂಸ್ಕೃತಿ ನೆಲೆಗೊಂಡಿದ್ದು ಸ್ಪಷ್ಟವಾಗಿ ತಿಳಿಯುತ್ತದೆ.

## ಮಧ್ಯಶಿಲಾಯುಗ

ಮಧ್ಯಶಿಲಾಯುಗ ಸಂಸ್ಕೃತಿಯು ಶಿಲಾಯುಗ ಸಂಸ್ಕೃತಿಯ ಮುಂದುವರಿಕೆಯಾಗಿ ಕಂಡುಬರುತ್ತದೆ. ಆದಿ ಹಳೆಶಿಲಾಯುಗ ಮತ್ತು ನವ ಶಿಲಾಯುಗದ ಮಧ್ಯಭಾಗದ ಕಾಲವನ್ನು ಮಧ್ಯ ಶಿಲಾಯುಗವೆಂದು ಕರೆಯಲಾಗಿದೆ. ಈ ಕಾಲಘಟ್ಟದಲ್ಲಿ ಆದಿಮಾನವನ ಜೀವನ ಕ್ರಮದಲ್ಲಿ ಹಲವು ಬದಲಾವಣೆಗಳು ಕಂಡುಬಂದಿರುವುದು, ಅವರ ಪುರಾವೆಗಳಿಂದ ದೃಢಪಟ್ಟಿದೆ. ತುಮಕೂರು ಪ್ರದೇಶದಲ್ಲಿ ಆದಿ ಹಳೆ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ದೊರೆತಲ್ಲಿಯೇ ಈ ಸಂಸ್ಕೃತಿಯ ಅವಶೇಷಗಳು ಕಂಡುಬಂದಿದ್ದು ಈ ಸಂಸ್ಕೃತಿಯ ವಿಕಾಸವನ್ನು ತಿಳಿಯಲು ಸಹಾಯಕವಾಗಿದೆ. ಒಟ್ಟು ೨೨ ನೆಲೆಗಳು ಈ ಭಾಗದಲ್ಲಿ ಕಂಡುಬಂದಿವೆ.[೯] ಹರೆಯುವ ಉಪಕರಣ, ಬೈರಿಗೆಗಳು, ಕೊಡಲಿ, ಕಡಗತ್ತಿ, ರಂಧ್ರಕಾರಕಗಳು, ಚೂರಿತರಹದ ಚಕ್ಕೆ, ಮಚ್ಚು ಮುಂತಾದವುಗಳನ್ನು ಬಳಸುತ್ತಿದ್ದರು.[೧೦] ದೊರೆತ ವಸ್ತುಗಳ ಆಕೃತಿಗಳು ಮತ್ತು ಅನುಸರಿಸಲ್ಪಟ್ಟ ಉತ್ಪಾದನಾ ತಂತ್ರಗಳನ್ನು ಗಮನಿಸಿದಾಗ ಮಧ್ಯಶಿಲಾಯುಗ ಸ್ಪಷ್ಟವಾಗಿ ವೈಶಿಷ್ಟ್ಯಪೂರ್ಣವಾಗಿರುವುದು ವ್ಯಕ್ತವಾಗುತ್ತದೆ. ಆದರೂ ಈ ಶಿಲಾಸಂಸ್ಕೃತಿಯ ಕಾಲವನ್ನು ನಿರ್ದಿಷ್ಟವಾಗಿ ಸೂಚಿಸಲು ರಾಬರ್ಟ್‌ಬ್ರೂಸ್ ಫೂಟ್‌ರು ಸಹ ವಿಫಲರಾಗಿದ್ದಾರೆ.[೧೧] ಎಂಬುದಾಗಿ ಕೆ.ಬಿ.ಶಿವತಾರಕ್ ತಿಳಿಸಿದ್ದಾರೆ.

## ನೂತನ ಶಿಲಾಯುಗ

ಮಧ್ಯಶಿಲಾಯುಗ ಮತ್ತು ಸೂಕ್ಷ್ಮ ಶಿಲಾಯುಗದ ನಡುವಿನ ಕಾಲವನ್ನು ನೂತನ ಶಿಲಾಯುಗ ಅಥವಾ ಹೊಸ ಶಿಲಾಯುಗವೆಂದು ಪರಿಗಣಿಸಲಾಗಿದೆ. ಅ.ಸುಂದರರವರ 'ಕರ್ನಾಟಕದ ಪ್ರಾಗೈತಿಹಾಸ' ಮತ್ತು 'ಪಾಶ್ಚ್ಯವಸ್ತು ಸಂಶೋಧನೆ' ಕೃತಿಗಳಲ್ಲಿ ಇದರ ಬಗ್ಗೆ ಉಲ್ಲೇಖಿಸಲಾಗಿದೆ. ಕೆ.ಬಿ.ಶಿವತಾರಕ್

ರವರ 'ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು' ಮತ್ತು 'ಕರ್ನಾಟಕದ ಪುರಾತತ್ವ ನೆಲೆಗಳು' ಎಂಬುದರಲ್ಲಿ ಸೂಕ್ತ ದಾಖಲೆಗಳನ್ನು ನೀಡಿದ್ದಾರೆ. ಡಿ.ಎನ್.ಯೋಗೀಶ್ ರವರ ಸಂಪಾದನ 'ಜಯಮಂಗಲಿ' ಸ್ಮರಣ ಸಂಚಿಕೆ, ಪಿ.ವಿ.ಕೃಷ್ಣಮೂರ್ತಿ ಸಂಪಾದನದ 'ಸೂರ್ಯಕೀರ್ತಿ' ಅಭಿನಂದನಾ ಗ್ರಂಥ ಮೊದಲಾದವು ಅಧ್ಯಯನಕ್ಕೆ ಸಹಾಯಕವಾಗಿವೆ.

ತುಮಕೂರು ಪ್ರದೇಶದ ಪ್ರತಿ ತಾಲ್ಲೂಕಿನಲ್ಲಿ ಶೋಧಿಸಲ್ಪಟ್ಟ ಈ ಶಿಲಾಯುಗ ನೆಲೆಗಳನ್ನು ಶಿವತಾರಕ್‌ರವರು ಪಟ್ಟಿ ಮಾಡಿದ್ದಾರೆ ಉದಾಹರಣೆಗೆ ಗಂಗ್ಡಾನಹಳ್ಳಿ, ಹೇರೂರು, ಕಲ್ಲೇನಹಳ್ಳಿ, ರಜತಾದ್ರಿಪುರ, ಸಂಪಿಗೆ, ಜಲಗಾರದಿಬ್ಬ, ಸಿದ್ಧಗಂಗಾ ಬೆಟ್ಟ, ಕೈದಾಳ, ನಿಡಗಲ್ಲು, ನಾಗಲಾಪುರ, ಪಾವಗಡ, ಯಲ್ಲಪ್ಪನಾಯಕನ ಹೊಸಕೋಟೆ, ರಾಚಮಾರನ ಹಳ್ಳಿ, ಅವರ್ಗಲ್ಲು ಮಧುಗಿರಿ, ಸಿದ್ದಾಪುರ, ಬೂದಿಗುಡ್ಡ, ಬುಕ್ಕಾಪಟ್ಟಣ[೧೨] ಮುಂತಾದವು.

ನೂತನ ಶಿಲಾಯುಗ ಸಂಸ್ಕೃತಿಯನ್ನು ಕ್ರಾಂತಿಕಾರಿಯುಗವೆಂದು ಪರಿಗಣಿಸಲಾಗಿದೆ. ಇದು ಹೆಚ್ಚು ಅಭಿವೃದ್ಧಿ ಹೊಂದಿದ್ದು ವ್ಯವಸ್ಥಿತ ಸಮುದಾಯದತ್ತ ಸಾಗಿದೆ. ಈ ಯುಗದಲ್ಲಿ ಮಾನವನು ಬೇಟೆಯೊಡನೆ ಕೃಷಿ ಮತ್ತು ಪಶುಸಂಗೋಪನೆ ಮುಂತಾದ ನಿರ್ದಿಷ್ಟ ಕಾರ್ಯದಲ್ಲಿ ತೊಡಗಿದನು. ಉಪಕರಣಗಳ ಮಾದರಿಯಲ್ಲಿ ಬದಲಾವಣೆ ಕಂಡುಬಂದಿತು. ಉಜ್ಜಿ ನಯಗೊಳಿಸಿದ ಉಪಕರಣಗಳು, ಮೃತ್ ಪಾತ್ರೆಗಳು, ಕೊಡಲಿ, ಬಾಚಿ, ಉಳಿ, ಸುತ್ತಿಗೆ, ಉಜ್ಜುಗ (ಅರೆಯುವ ಕಲ್ಲು) ಕಂದು, ಕೆಂಪುವರ್ಣದ ಮಡಿಕೆಗಳು, ಕವಣೆಕಲ್ಲು ಮುಂತಾದವು ಲಭ್ಯವಾಗಿವೆ. ಈ ಶಿಲಾಯುಗದ ಮಾನವನು ಒಂದು ಕಡೆ ನೆಲೆಯಾಗಿ ನಿಂತು ವಾಸಿಸತೊಡಗಿದ. ಮೃತ್ ಪಾತ್ರೆಯ ಬಳಕೆಯು ಗಣನೀಯವಾಗಿದ್ದು ಆರಂಭದಲ್ಲಿ ಕೈಯಿಂದ ಮಾಡಿದ ಮಣ್ಣಿನ ಪಾತ್ರೆ ಇದ್ದು ನಂತರ ಮಂದಗತಿಯಲ್ಲಿ ತಿರುಗಿಸಿದ ಚಕ್ರ ಮತ್ತು ಪರಿಷ್ಕೃತ ಚಕ್ರಗಳಲ್ಲಿ ಪಾತ್ರೆಗಳನ್ನು ತಯಾರಿಸಿರುವುದು ಕಂಡುಬಂದಿದೆ.[೧೩]

ಪೆನ್ನಾರ್ ನದಿಪಾತ್ರದಲ್ಲಿ ಈ ಸಂಸ್ಕೃತಿ ಹಂತವು ಹೆಚ್ಚು ಕಂಡುಬಂದಿದ್ದು, ಶಿಂಷಾನದಿ ಪಾತ್ರದಲ್ಲಿ ವಿರಳವಾಗಿದೆ.[೧೪] ಮಾನವನ ಜೀವನಕ್ರಮ ಮಧ್ಯಶಿಲಾಯುಗ ಸಂಸ್ಕೃತಿಗಿಂತ ಸ್ವಲ್ಪ ಸುಧಾರಿಸಿತ್ತು. ಅಂದರೆ ಅಲೆದಾಟ ನಿಲ್ಲಿಸಿ ಒಂದು ಕಡೆ ನೆಲೆನಿಂತು, ಸಮೂಹ ಜೀವನ, ವ್ಯವಸ್ಥಿತ ಸಮಾಜದಲ್ಲಿ ನೆಲೆಸಿರುವುದು ಹಾಗೂ ಸಾಂಪ್ರದಾಯಿಕವಾಗಿ ಶವಸಂಸ್ಕಾರ ಮಾಡಿರುವುದು ಈ ಯುಗದ ವೈಶಿಷ್ಟ್ಯತೆಯನ್ನು ತೋರಿಸುತ್ತದೆ.[೧೫] ಒಟ್ಟಾರೆ ಸಮೃದ್ಧ ವಾಸ್ತವ್ಯ ನೆಲೆಗಳೆಂದು ಗುರುತಿಸಬಹುದಾಗಿದೆ. ಸತ್ತ ಮನುಷ್ಯನನ್ನು ಹೂಳುವುದು, ಇಲ್ಲವೆ ಸುಟ್ಟು ಅವನ ಬೂದಿಯನ್ನು ಮಡಕೆಗಳಲ್ಲಿ ಸಂಗ್ರಹಿಸಿರುವುದು ಪ್ರಸ್ತುತ ಆ ಸಂಸ್ಕೃತಿಯ ಹೆಚ್ಚಿನ ಅಧ್ಯಯನಕ್ಕೆ ಪುರಾವೆಗಳಾಗಿವೆ. ಮಣ್ಣಿನಿಂದ ಮಡಕೆಗಳನ್ನು ಮಾಡಿರುವುದು, ಮನೆ ಕಟ್ಟುವುದು, ಪಶುಪಾಲನೆ ಮತ್ತು ಕೃಷಿ ಕಾರ್ಯಚಟುವಟಿಕೆಗಳು ಈ ನೂತನ ಶಿಲಾಯುಗ ಬದಲಾದ ವೈಶಿಷ್ಟ್ಯತೆಯನ್ನು ತಿಳಿಸುತ್ತದೆ. ಅಡುಗೆಗೆ ಬೆಂಕಿ ಉಪಯೋಗಿಸುವುದು, ಆಹಾರ ಸಂಗ್ರಹಣೆ ಮಾಡುವುದು ತಿಳಿದಿತ್ತೆಂದು ಅ.ಸುಂದರರವರು ಉಲ್ಲೇಖಿಸಿದ್ದಾರೆ.

ನೂತನ ಶಿಲಾಯುಗದ ಮಾನವನು ಕೃಷಿ ಮತ್ತು ಬೇಟೆಗಾಗಿ ಬಳಸುತ್ತಿದ್ದ ಆಯುಧಗಳಿಗೆ ಮೆರಗು ನೀಡಲು, ಅವುಗಳನ್ನು ಚೂಪಾಗಿಸಲು ಬಂಡೆಗಳ ಮೇಲೆ ಉಜ್ಜಿರುವುದು ನೆಲೆಗಳಲ್ಲಿನ ಬಂಡೆಗಳ ಮೇಲಿರುವ ಗುರುತುಗಳು ತೋರ್ಪಡಿಸುತ್ತವೆ. ಈ ಸಂಸ್ಕೃತಿಯಲ್ಲಿ ಡೈಕ್, ಸಾಲರೈಟ್, ಬಳಪದಕಲ್ಲು ಮತ್ತು ಕಣಶಿಲೆಗಳ ಬಳಕೆಯಾಗಿದೆ.[೧೬] ಎಂಬುದಾಗಿ ಕೆ.ಬಿ.ಶಿವತಾರಕ್ ತಿಳಿಸಿದ್ದಾರೆ. ಇವೆಲ್ಲವನ್ನು ಗಮನಿಸಿದರೆ ನೂತನ ಶಿಲಾಸಂಸ್ಕೃತಿ ಮಧ್ಯಶಿಲಾಯುಗಕ್ಕಿಂತ ಬದಲಾವಣೆ ಹೊಂದಿದ ಹಾಗೂ ಬೌದ್ಧಿಕತೆಯಲ್ಲಿ ವಿಕಾಸವನ್ನು ಕಂಡಂತಹ ಕಾಲಘಟ್ಟವಾಗಿದೆ. ಇದರಿಂದಾಗಿ ಆಲೋಚನೆ ಬದಲಾದಂತೆ ಮಾನವನ ಜೀವನ ಶೈಲಿ ಬದಲಾವಣೆಯಾಗಿದೆ ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಇದೊಂದು ಪ್ರಯೋಗಾತ್ಮಕ ಬೆಳವಣಿಗೆ ಎನ್ನಬಹುದು.

## ಸೂಕ್ಷ್ಮ ಶಿಲಾಯುಗ ಅಥವಾ ಲೋಹಯುಗ

ನೂತನ ಶಿಲಾಯುಗದ ನಂತರ ಕಂಡುಬಂದಿರುವ ಮಾನವನ ಸಂಸ್ಕೃತಿಗೆ ಸೂಕ್ಷ್ಮ ಶಿಲಾಯುಗವೆಂದು ಕರೆಯಲಾಗಿದೆ. ಇದೇ ಕಾಲದಲ್ಲಿ ಲೋಹದ ಉಪಯೋಗ ಕಂಡುಬಂದಿರುವುದರಿಂದ ಲೋಹಯುಗವೆಂದೂ ಪರಿಗಣಿಸಲ್ಪಟ್ಟಿದೆ. ಅಂದರೆ ಲೋಹಯುಗದಲ್ಲಿ ಮಾನವನು ತನ್ನ ದಿನನಿತ್ಯದ ಚಟುವಟಿಕೆಗಳಿಗೆ ಲೋಹದ ಪರಿಜ್ಞಾನ ಅರಿತು ಅದನ್ನು ತನಗೆ ಬೇಕಾದ ರೀತಿಯಲ್ಲಿ ಉಪಯೋಗಿಸಿದ್ದಾನೆ. ತಾಮ್ರ ಮತ್ತು ಚಿನ್ನದ ಲೋಹಗಳು ಬಳಕೆಯಾಗಿವೆ. ಇವುಗಳಿಂದ ಮಡಿಕೆ, ತಟ್ಟೆ, ಬಟ್ಟಲು, ಕುಂಬಗಳನ್ನು ತಯಾರಿಸಿದ್ದಾನೆ.

ಸೂಕ್ಷ್ಮ ಶಿಲಾಯುಗದಲ್ಲಿ ಮಾನವ ಪ್ರಾಣಿಗಳನ್ನು ಬೇಟೆಯಾಡುವ, ಮೀನು ಹಿಡಿಯುವ, ಆಹಾರ ಸಾಮಗ್ರಿಗಳನ್ನು ಸಂಗ್ರಹಿಸುವ ವ್ಯವಸ್ಥೆ ಇದ್ದಿತು.[೧೭] ಈ ಶಿಲಾ ಸಂಸ್ಕೃತಿಗೆ ಸಂಬಂಧಿಸಿದಂತೆ, ಅ.ಸುಂದರರವರ 'ಕರ್ನಾಟಕ ಪ್ರಾಗೈತಿಹಾಸ, ಪ್ರಾಚ್ಯವಸ್ತು ಸಂಶೋಧನೆ', ಲಕ್ಷ್ಮಣ್ ತೆಲಗಾವಿರವರ ಸಂಪಾದನದ 'ಹರತಿಸಿರಿ', ಕೆ.ಬಿ.ಶಿವತಾರಕ್‌ರವರ 'ಕರ್ನಾಟಕದ ಪುರಾತತ್ವ ನೆಲೆಗಳು' ಮುಂತಾದವು ವಿವರಣೆ ಹೊಂದಿವೆ. ತುಮಕೂರು ಪ್ರದೇಶದಲ್ಲಿ ಈ ಶಿಲಾಸಂಸ್ಕೃತಿಯು ನೆಲೆಗೊಂಡಿದ್ದರ ಬಗ್ಗೆ ಕೆ.ಬಿ.ಶಿವತಾರಕ್‌ರವರ 'ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು' ಎಂಬ ಮಹಾ ಪ್ರಬಂಧ, ಕೆ.ಅಭಿಶಂಕರರವರ ಸಂಪಾದನದ ತುಮಕೂರು ಜಿಲ್ಲಾ ಗೆಜೆಟಿಯರ್ ಗಳಲ್ಲಿ ಹೆಚ್ಚು ವಿವರಣೆಯಿದೆ.

ಪ್ರಸಿದ್ಧ ಭೂಗರ್ಭವಿಜ್ಞಾನಿ ಸಾಂಬಶಿವ ಐಯ್ಯರ್ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಉಪಕರಣಗಳನ್ನು ಹೊಳಕಲ್ಲು ಬೆಟ್ಟ(ಶಿರಾ)ದಲ್ಲಿ ಪತ್ತೆಹಚ್ಚಿದರು. ಕಿನ್ಸಿಯಡ್ ಲೀರವರು ಮೀನಾಕ್ಷಯ್ಯ ಎಸ್ಟೇಟ್(ತುಮಕೂರು) ಪ್ರದೇಶದಲ್ಲಿ ಶೋಧಿಸಿದರು. ಈ ಎರಡು ನೆಲೆಗಳ ಸಂಗ್ರಹವನ್ನು ರಾಬರ್ಟ್‌ಬ್ರೂಸ್ ಪೂಟ್ ಹೆಚ್ಚಿನ ಅಧ್ಯಯನ ನಡೆಸಿ ಅವುಗಳ ವಿವರಣೆ ಪ್ರಕಟಿಸಿದರು. ಅಲ್ಚಿನ್‌ರವರು ಕಿಬ್ಬನಹಳ್ಳಿ (ತಿಪಟೂರು) ಪ್ರದೇಶದಲ್ಲಿ ಸೂಕ್ಷ್ಮಶಿಲಾಸಂಸ್ಕೃತಿಯ ಅವಶೇಷಗಳನ್ನು ಪತ್ತೆ ಮಾಡಿದರು. ಇದರಿಂದಾಗಿ

ಪ್ರಾಗೈತಿಹಾಸಿಕ ದೃಷ್ಟಿಯಿಂದ ಕಿಬ್ಬನಹಳ್ಳಿ ಗಮನಾರ್ಹ ನೆಲೆಯಾಗಿ ಕಂಡುಬಂದಿದೆ[೧೮] ಎಂದು ಕೆ.ಬಿ.ಶಿವತಾರಕ್ ತಿಳಿಸಿದ್ದಾರೆ. ಇವರು ತುಮಕೂರು ಪ್ರದೇಶದಲ್ಲಿನ ಪ್ರತಿ ತಾಲ್ಲೂಕಿನಲ್ಲೂ ದೊರೆತಿರುವ ಈ ಶಿಲಾಸಂಸ್ಕೃತಿಯ ನೆಲೆಗಳನ್ನು ಪಟ್ಟಿ ಮಾಡಿದ್ದಾರೆ. ಉದಾಹರಣೆಗೆ ಹುಲಿಯೂರು ದುರ್ಗ, ಹಿಮಗಿರಿ (ಕುಣಿಗಲ್) ಇರಕಸಂದ್ರ ಕಾಲೋನಿ (ಕೊರಟಗೆರೆ) ಸಂಪಿಗೆ (ತುರುವೇಕೆರೆ), ಕರಡಿ, ಕಿಬ್ಬನಹಳ್ಳಿ, ಕಾರೇಕುರ್ಚಿ, ರಜತಾದ್ರಿಪುರ ಸಿಡ್ಲೇಹಳ್ಳಿ (ತಿಪಟೂರು) ನಾಗಲಾಪುರ, ನಿಡಗಲ್ಲು(ಪಾವಗಡ), ಕತ್ತಿ ರಾಜನಹಳ್ಳಿ, ಗುರುಮ್ಮನಕಟ್ಟೆ, ಬಿಜ್ಜಾವರ, ಅರ್ವಗಲ್ಲು, (ಮಧುಗಿರಿ) ಹೊಳಕಲ್ಲು ಬೆಟ್ಟ(ಶಿರಾ)

ಸೂಕ್ಷ್ಮಶಿಲಾ ಯುಗದ ಉಪಕರಣಗಳ ತಾಂತ್ರಿಕತೆಯಲ್ಲಿ ಸಾಕಷ್ಟು ಮಾರ್ಪಾಡು ಕಂಡುಬಂದಿದೆ. ಜಾಮಿತಿಯ ಆಕೃತಿಗಳನ್ನು ರೂಪಿಸಲು ಹಾಗೂ ಕಚ್ಚುಗಳನ್ನುಂಟು ಮಾಡಲು ಶಿಲೆಗಳನ್ನು ಕತ್ತರಿಸುವ ತಂತ್ರ ಬಳಕೆಯಾಗಿದೆ. ಅಲಗು ಮತ್ತು ಅಲಗಿಲ್ಲದ ಹಾಗೂ ಸಂಯುಕ್ತ ಉಪಕರಣಗಳು ಹೆಚ್ಚು ಉಪಯೋಗವಾಗಿವೆ.[೧೯] ಒಟ್ಟಾರೆ ಈ ಶಿಲಾಯುಗದ ಜನರು ಸೌಂದರ್ಯ ಪ್ರಜ್ಞೆಯುಳ್ಳವರಾಗಿದ್ದು ವಿವಿಧ ಉಪಕರಣಗಳ ಮೇಲೆ ಬಣ್ಣಬಳಿದಿರುವುದು ಕಂಡುಬಂದಿದೆ. ತಾಮ್ರದ ಉಪಕರಣ ತಯಾರಿಸಲಾಗಿದೆ. ಶವಸಂಸ್ಕಾರ, ಮನೆಗಳ ನಿರ್ಮಾಣ, ಸಮುದಾಯ ಜೀವನ, ಬೇಟೆಯೊಂದಿಗೆ ಮೀನುಗಾರಿಕೆ ಹಾಗೂ ವ್ಯವಸಾಯದ ಜ್ಞಾನ ಹೊಂದಿದ್ದರು ಎಂದು ಅ.ಸುಂದರ ತಿಳಿಸಿದ್ದಾರೆ.

## ಬೃಹತ್ ಕಬ್ಬಿಣ ಶಿಲಾಯುಗ

ಶಿಲಾಯುಗದಲ್ಲಿ ಅಂತಿಮ ಹಾಗೂ ಹೆಚ್ಚು ಮುಂದುವರಿದು ಕಬ್ಬಿಣದ ಪರಿಜ್ಞಾನ ಪಡೆದಿರುವ ಕಾಲಕ್ಕೆ ಬೃಹತ್ ಶಿಲಾಯುಗವೆಂದು ಕರೆಯಲಾಗಿದೆ.[೨೦] ಭಾರತದಲ್ಲಿ ನೂತನ ತಾಮ್ರ ಶಿಲಾಯುಗ ಸಂಸ್ಕೃತಿಯು ಕಬ್ಬಿಣವನ್ನು ಉಪಯೋಗಿಸುವ ಬೃಹತ್ ಶಿಲಾಯುಗ ಸಂಸ್ಕೃತಿಗೆ ದಾರಿ ಮಾಡಿಕೊಟ್ಟಿತು. ವಿವಿಧ ಮಾದರಿಯ ಬೃಹತ್ ಶಿಲಾಗೋರಿಗಳನ್ನು ಈ ಸಂಸ್ಕೃತಿಯ ಜನರು ನಿರ್ಮಿಸಿದ್ದರಿಂದ ಇದನ್ನು ಬೃಹತ್ ಶಿಲಾಸಂಸ್ಕೃತಿ[೨೧] ಎಂದು ಕರೆಯಲಾಗಿದೆ ಎಂಬುದಾಗಿ ಕೆ.ಬಿ.ಶಿವತಾರಕ್ ತಿಳಿಸಿದ್ದಾರೆ. ಈ ಶಿಲಾ ಸಂಸ್ಕೃತಿಯ ಲಕ್ಷಣಗಳು ತುಮಕೂರು ಪ್ರದೇಶದ ಎಲ್ಲ ಭಾಗಗಳಲ್ಲಿ ಕಂಡುಬಂದಿವೆ. ಭಾರತದ ಕೇಂದ್ರ ಪುರಾತತ್ವ ಇಲಾಖೆ ಪರಿವೀಕ್ಷಣೆ ಮಾಡಿದ ಈ ಶಿಲಾಸಂಸ್ಕೃತಿ ಕುರಿತು ಅ.ಸುಂದರ, ಎಂ.ಶೇಷಾದ್ರಿ ಮುಂತಾದವರು ಸಂಶೋಧನೆ ಮಾಡಿ ದಾಖಲಿಸಿದ್ದಾರೆ. ತುಮಕೂರು ಪ್ರದೇಶದ ಬೃಹತ್ ಶಿಲಾಯುಗದ ನೆಲೆಗಳನ್ನು ಕೆ.ಬಿ.ಶಿವತಾರಕ್‌ರವರು ಗುರುತಿಸಿ ಪಟ್ಟಿಮಾಡಿರುವುದನ್ನು ಅವರ 'ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು' ಮಹಾಪ್ರಬಂಧ ಒಳಗೊಂಡಿದೆ ಉದಾಹರಣೆಗೆ

ಗಂಗ್ಗಾಹಳ್ಳಿ, ತೆಪ್ಪಸಂದ್ರ (ಕುಣಿಗಲ್) ಇರಕಸಂದ್ರ ಕಾಲೋನಿ ತಣ್ಣೇನಹಳ್ಳಿ (ಕೊರಟಗೆರೆ) ಕೇರಳಕಟ್ಟೆ, ಜಕ್ಕನಹಳ್ಳಿ (ತಿಪಟೂರು) ಅಗ್ರಹಾರ, ಕೈದಾಳ, ಗೌಡನಕಟ್ಟೆ, ಚಿನಗ, ಡಣಾಪುರ, ಚಿನವಾರ, ಬಂಡೇಹಳ್ಳಿ, ಮಾರನಾಯಕನ ಪಾಳ್ಯ, ಮಂಚಕಲ್ ಕುಪ್ಪೆ, ಸಿದ್ಧಗಂಗಾಬೆಟ್ಟ, ಬೆಳ್ಳಿ, ಬಟ್ಟಲಹಳ್ಳಿ,

ಸೀಗೆಹಳ್ಳಿ, ಹಿರೇಗುಂಡಗಲ್ಲು, (ತುಮಕೂರು) ಕಣಕಲಬಂಡೆ, ಕತ್ತಿಕ್ಯಾತನಹಳ್ಳಿ, ತಪ್ಪಗಾನ ದೊಡ್ಡಿ, ನಿಡಗಲ್ಲು, ಪಳವಳ್ಳಿ, ಪಾವಗಡ. ಬಸವನಬೆಟ್ಟ, ಮರಿದಾಸನಹಳ್ಳಿ, ಯಲ್ಲಪ್ಪನಾಯಕನ ಹಳ್ಳಿ, ಯಲ್ಲಪ್ಪ ನಾಯಕನ ಹೊಸ ಕೋಟೆ, ರಾಚಮಾರನಹಳ್ಳಿ (ಪಾವಗಡ) ಕತ್ತಿರಾಜನಹಳ್ಳಿ, ಮಧುಗಿರಿ, ಗುರಮ್ಮನ ಕಟ್ಟೆ, ಮಿಡಿಗೇಶಿ, ಸಿದ್ದಾಪುರ (ಮಧುಗಿರಿ) ಬುಕ್ಕಾಪಟ್ಟಣ, ಹೊಳಕಲ್ಲುಬೆಟ್ಟ (ಸಿರಾ) ಮುಂತಾದ ನೆಲೆಗಳು ಕಂಡುಬಂದಿವೆ.

ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ಬೃಹತ್ ಶಿಲಾಯುಗ ಸಂಸ್ಕೃತಿ ಬಗ್ಗೆ ಮಾಹಿತಿ ದೊರೆತಿದೆ. ತುಮಕೂರು ಪ್ರದೇಶದ ಬಹುತೇಕ ಎಲ್ಲ ತಾಲ್ಲೂಕುಗಳಲ್ಲಿ ಇದರ ಕುರುಹುಗಳು ಸಿಕ್ಕಿವೆ. ಇದರ ಕಲ್ಗೋರಿಗಳ ಮಾದರಿಗಳ ವರ್ಗೀಕರಣ, ಭೌಗೋಳಿಕ ಹಾಗೂ ಕಾಲಮಾನದ ದೃಷ್ಟಿಯಿಂದ ಈ ಸಂಸ್ಕೃತಿಯ ಉಗಮ, ವಿಕಾಸ, ಪ್ರಸರಣ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳು, ಆಹಾರ ಪದ್ಧತಿ, ಆಭರಣಗಳು, ವಸತಿ, ವಿಶಿಷ್ಠವಾದ ಮೃತ್ ಪಾತ್ರೆಗಳು, ಲೋಹದ ತಂತ್ರಜ್ಞಾನ ಮುಂತಾದವುಗಳನ್ನು ಸಂಗ್ರಹಿಸಲಾಗಿದೆ.[೨೨] ಇದರಿಂದಾಗಿ ಈ ಶಿಲಾಸಂಸ್ಕೃತಿಯ ಚರಿತ್ರೆಯನ್ನು ನಿರ್ದಿಷ್ಟವಾಗಿ ತಿಳಿಯಲು ಸಾಧ್ಯವಾಗಿದೆ. ವ್ಯವಸಾಯ, ಪಶುಪಾಲನೆ, ಬೇಟೆ, ಮೀನುಗಾರಿಕೆ ಮುಂತಾದ ವೃತ್ತಿಕೈಗೊಂಡಿರುವುದು ಗೋಚರವಾಗಿದೆ.[೨೩] ಅವರು ಬಳಸಲ್ಪಟ್ಟಿರುವ ಸಾಧನೋಪಕರಣಗಳು ಕಬ್ಬಿಣ ಮತ್ತು ತಾಮ್ರ ಲೋಹಗಳಿಂದ ಮಾಡಲ್ಪಟ್ಟಿವೆ. ಜೊತೆಗೆ ಕಲ್ಲಿನ ಆಯುಧಗಳನ್ನು ಬಳಸಲಾಗಿದೆ.

ಈ ಸಂಸ್ಕೃತಿಯ ವಸತಿ ನಿವೇಶನಗಳಲ್ಲಿ ಕಪ್ಪು, ಕೆಂಪು, ಕೆಂಪು-ಕಪ್ಪು ವರ್ಣದ ಮೃತ್ ಪಾತ್ರೆಗಳು, ಕಬ್ಬಿಣದ ಅರೆಪ್ರಶಸ್ತ ಶಿಲೆಯ ಮಣಿಗಳು, ಶಂಖದ ಬಳೆಚೂರು, ಮಣ್ಣಿನ ಗೊಂಬೆಗಳು ಕಂಡುಬಂದಿವೆ. ಮಡಿಕೆಗಳು, ಲೋಹಗಳು, ಕತ್ತಿ, ಚಾಕು, ಉದ್ದದ ಸರಳುಗಳು ನಿತ್ಯದ ಗೃಹೋಪಯೋಗಿ ಉಪಕರಣಗಳಾಗಿವೆ. ಚಾಕು, ಬಾಣ, ಕೊಕ್ಕೆ, ಬಿಲ್ಲೆ, ಗಾಜು, ಕಲ್ನಾರು ಉತ್ತಮ ಜಾತಿಯ ಕಾರ್ನಿಲಿಯನ್ ಕ್ರಿಸ್ಟಲ್ ಕಲ್ಲುಗಳು ಮೊದಲಾದವನ್ನು ಕೃಷಿ ಚಟುವಟಿಕೆ ಹಾಗೂ ಬೇಟೆಗೆ ಉಪಯೋಗಿಸಲಾಗಿದೆ.

ಸಾಧಾರಣವಾಗಿ ಹೆಚ್ಚಿನ ನಿವೇಶನಗಳು ಬೆಟ್ಟದ ತಪ್ಪಲು ಪ್ರದೇಶ ಮತ್ತು ಮೈದಾನ ಪ್ರದೇಶದಲ್ಲಿವೆ. ಹೆಚ್ಚಿನ ನಿವೇಶನಗಳು ಕೃಷಿ ಭೂಮಿಗಳಾಗಿದ್ದು, ಸಾಕಷ್ಟು ಹಾಳಾಗಿವೆ. ಕಲ್ಗೋರಿಗಳ ನಿರ್ಮಾಣ ಈ ಶಿಲಾಸಂಸ್ಕೃತಿಯ ವೈಶಿಷ್ಟ್ಯವಾಗಿದೆ.[೨೪] ವಸತಿ ನೆಲೆಗಳಲ್ಲಿ ಶವ ಸಂಸ್ಕಾರ ಕುಣಿಗಳಿವೆ. ಉತ್ತರ -ದಕ್ಷಿಣಾಭಿಮುಖವಾಗಿರುವ ಶವಕುಣಿಕೆಯುದ್ದಕ್ಕೂ ಕಲ್ಲು ಚಪ್ಪಡಿಗಳನ್ನು ದಟ್ಟವಾಗಿ ಹರಡಿರುವುದು ಕಂಡುಬಂದಿದೆ. ತುಮಕೂರು ಪ್ರದೇಶದ ಕೊರಟಗೆರೆ, ಮಧುಗಿರಿ, ಪಾವಗಡ ತಾಲ್ಲೂಕುಗಳಲ್ಲಿ ದಕ್ಷಿಣೋತ್ತರವಾಗಿ ಹರಡಿರುವ ನಿವೇಶನಗಳು ಸಿಸ್ಟ್ ಶಿಲಾ ಪದರದ ಪ್ರಸರಣಕ್ಕೆ ಹೊಂದಿಕೊಂಡಂತಿವೆ. ಬೃಹತ್ ಶಿಲಾಯುಗ ಸಂಸ್ಕೃತಿಯ ಶಿಲಾಗೋರಿಗಳನ್ನು 'ಮೊರಿಯಗುಡಿ', 'ಮೊರಿಯಮನೆ' ಎಂಬ ಹೆಸರುಗಳಿಂದ ಸೂಚಿಸಲಾಗಿದೆ. ಪ್ರಸ್ತುತ ಶಿಲಾಗೋರಿಗಳಿರುವ ನೆಲೆಗಳಲ್ಲಿ ವಿವಿಧ ಮಾದರಿಯ

ಗೋರಿಗಳು ಕಂಡುಬಂದಿವೆ. ತುಮಕೂರು ಪ್ರದೇಶದಲ್ಲಿ ದೊರೆತ ಮಾದರಿಗಳನ್ನು ಕಲ್ಲುಗಪ್ಪೆ, ಗುಂಡುಗಲ್ಲಿನ ಕಲ್ಲಿನ ವೃತ್ತ, ಕಲ್ಲು ಚಪ್ಪಡಿಯ ಕಲ್ಲು ವೃತ್ತ, ಕಲ್ಮನೆ, ನಿಸುಗಲ್ಲು ಗೋರಿಗಳೆಂದು ಗುರುತಿಸಲಾಗಿದೆ.[೨೫]

ಈ ಶಿಲಾಯುಗದ ಮಾನವನ ವಾಸ್ತವ್ಯ ಪ್ರಸರಣವನ್ನು ಪರಿಶೀಲಿಸಿದಾಗ ಜಿಲ್ಲೆಯ ಪೂರ್ವಭಾಗಕ್ಕೆ ಬಂದಿರುವುದು ತಿಳಿಯುತ್ತದೆ. ಯಾವುದೇ ಕಲ್ಗೋರಿ ನಿರ್ಮಿಸಲು ಸೂಕ್ತವಾದ ಕಲ್ಲುಚಪ್ಪಡಿ, ಕಲ್ಲುಗುಂಡು ಇವುಗಳುಳ್ಳ ಬೆಟ್ಟದ ಸಾಲುಗಳ ಕಣಿವೆಗಳು ಪಶ್ಚಿಮಭಾಗದಲಿಲ್ಲ; ಆದರೆ ಪೂರ್ವಭಾಗದಲ್ಲಿ ಉತ್ತರ-ದಕ್ಷಿಣವಾಗಿ ಬೆಟ್ಟದ ಸಾಲು ಇದೆ. ಪಶ್ಚಿಮ ಭಾಗದಲ್ಲಿ ಕಬ್ಬಿಣದ ಅದಿರು ನಿಕ್ಷೇಪಗಳಿರುವ ನೆಲೆಗಳಿವೆ. ಈ ಶಿಲಾಸಂಸ್ಕೃತಿಯ ಜನರು ಕಬ್ಬಿಣದ ಅದಿರನ್ನು ಸಂಗ್ರಹಿಸಿ ಲೋಹವನ್ನು ತಯಾರು ಮಾಡುವ ತಂತ್ರಗಾರಿಕೆಯನ್ನು ಹೊಂದಿರುವುದು ಸ್ಪಷ್ಟವಾಗಿದೆ.

ತುಮಕೂರು ಪ್ರದೇಶದಲ್ಲಿ ೨೦ನೆಯ ಶತಮಾನದಲ್ಲಿ ನಡೆದ ಸಂಶೋಧನೆಯ ಫಲವಾಗಿ ಆದಿಮಾನವನ ಜೀವನ ನಿರ್ವಹಣೆ ಮತ್ತು ಪ್ರಸರಣದ ವಿವರಗಳು ಲಭ್ಯವಾಗಿವೆ. ಮೈಸೂರು ವಿಶ್ವವಿದ್ಯಾಲಯದ ಪ್ರಾಚ್ಯವಸ್ತು ಇಲಾಖೆಯ ಪ್ರಾಧ್ಯಪಕರಾದ ಎಂ.ಶೇಷಾದ್ರಿ, ಎಂ.ಚ್.ಕೃಷ್ಣ, ರಾಬರ್ಟ್ ಬ್ರೂಸ್ ಪೂಟ್, ಎಸ್.ಶ್ರೀಕಂಠಶಾಸ್ತ್ರಿ, ಅ.ಸುಂದರ, ಬಿ.ನರಸಿಂಹಯ್ಯ, ಆಂಗ್ಲ ಪುರಾತತ್ವ ಸಂಶೋಧಕರಾದ ಆರ್.ಎ.ಕೋಲ್ ಮುಂತಾದವರು ಶ್ರಮಿಸಿದ್ದಾರೆ. ಇವರ ಕೃತಿಗಳು ಲೇಖನಗಳು ಅಧ್ಯಯನ ನಡೆಸಲು ಸಹಾಯಕವಾಗಿವೆ.

ತುಮಕೂರು ಪ್ರದೇಶದ ಶಿಲಾಯುಗ ಚರಿತ್ರೆಗೆ ಸಂಬಂಧಪಟ್ಟಂತೆ ಅ.ಸುಂದರರವರ 'ಕರ್ನಾಟಕ ಪ್ರಾಗೀತಿಹಾಸ', 'ಪ್ರಾಚ್ಯವಸ್ತು ಸಂಶೋಧನೆ', 'ಬೃಹತ್ ಕಬ್ಬಿಣಯುಗ ಚರಿತ್ರೆ', ಕೆ.ಬಿ.ಶಿವತಾರಕ್‌ರವರ 'ಕರ್ನಾಟಕ ಪುರಾತತ್ವ ನೆಲೆಗಳು', 'ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು' ಮಹಾ ಪ್ರಬಂಧ, ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್', ಸೂರ್ಯನಾಥ ಕಾಮತ್‌ರವರ ಚರಿತ್ರೆ ಸಂಪುಟಗಳು, ಬಿ.ಷೇಕ್ ಅಲಿರವರ 'ಕರ್ನಾಟಕ ಚರಿತ್ರೆ' ಸಂಪುಟ ೧, ಪಿ.ವಿ.ಕೃಷ್ಣಮೂರ್ತಿ ಮತ್ತು ಕೆ.ವಸಂತಲಕ್ಷ್ಮಿರವರ ಸಂಪಾದನದ 'ಸೂರ್ಯಕೀರ್ತಿ' ಅಭಿನಂದನಾ ಗ್ರಂಥ ಮುಂತಾದವು ಶಿಲಾಯುಗ ಮಾನವನ ನೆಲೆಗಳು, ಜೀವನಕ್ರಮ, ಉಪಕರಣಗಳು, ಶವಸಂಸ್ಕಾರ, ಸಂಸ್ಕೃತಿಯ ವಿಕಾಸದ ಬಗ್ಗೆ ಸ್ಥೂಲ ವಿವರಣೆ ನೀಡುತ್ತವೆ. ಕೆ.ಬಿ.ಶಿವತಾರಕ್‌ರವರ ಮಹಾಪ್ರಬಂಧ ಒಂದು ಅತ್ಯುತ್ತಮ ಕೃತಿಯಾಗಿದೆ. ಇದರಲ್ಲಿ ಈ ಪ್ರದೇಶದಲ್ಲಿನ ಪ್ರತಿ ಹಂತದ ಶಿಲಾಯುಗ ಮಾನವನ ಸಾಂಸ್ಕೃತಿಕ ಪ್ರಸರಣವನ್ನು ಸೂಕ್ಷ್ಮವಾಗಿ ಅವಲೋಕಿಸಿ ದಾಖಲಿಸಲಾಗಿದೆ.

## ಸಾಮ್ರಾಜ್ಯಗಳ ಯುಗ

**ತಲಕಾಡಿನ ಗಂಗರು :** ಇತಿಹಾಸ ಪ್ರಸಿದ್ಧ ತುಮಕೂರು ಪ್ರದೇಶ ಪ್ರಾಚೀನ ಕಾಲದಿಂದಲೂ ಹಲವು ರಾಜಮನೆತನಗಳ ಆಡಳಿತಕ್ಕೆ ಒಳಪಟ್ಟಿತ್ತು ಎಂಬುದು ಚಾರಿತ್ರಿಕ ಕೃತಿಗಳಿಂದ ತಿಳಿದುಬರುತ್ತದೆ.

ತುಮಕೂರು ಪ್ರದೇಶದಲ್ಲಿ ಆಳ್ವಿಕೆಯನ್ನು ನಡೆಸಿದ ಈ ರಾಜಮನೆತನಗಳ ಇತಿಹಾಸವನ್ನು ಅಧ್ಯಯನದ ದೃಷ್ಟಿಯಿಂದ ಕಾಲಾನುಕ್ರಮಣಿಗೆ ಅನುಗುಣವಾಗಿ ಪ್ರಾಚೀನ ಮತ್ತು ಮಧ್ಯಕಾಲೀನ ಇತಿಹಾಸ ಎಂದು ಎರಡು ಭಾಗಗಳಲ್ಲಿ ವಿಂಗಡಿಸಿ ಅಧ್ಯಯನ ಮಾಡಲಾಗಿದೆ. ದಕ್ಷಿಣ ಭಾರತ ಮತ್ತು ಕನ್ನಡ ನಾಡಿನಲ್ಲಿ ಏಳಿಗೆ ಹೊಂದಿದ ಹಲವು ರಾಜಮನೆತನಗಳ ಆಳ್ವಿಕೆಗೆ ಈ ತುಮಕೂರು ಪ್ರದೇಶ ಒಳಪಟ್ಟಿರುವುದನ್ನು ಚಾರಿತ್ರಿಕ ದಾಖಲೆಗಳಿಂದ ಗ್ರಹಿಸಲಾಗಿದೆ. ಇಲ್ಲಿ ದೊರೆತ ಶಾಸನಗಳು, ದೇವಾಲಯಗಳು, ಕೋಟೆ-ಕೊತ್ತಲುಗಳು, ಕೆರೆ-ಕುಂಟೆಗಳು, ವೀರಗಲ್ಲು ಮತ್ತು ಮಹಾಸತಿ ಕಲ್ಲುಗಳು ಇವರ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ. ಗಂಗರ ಕಾಲದಲ್ಲಿ ರಚನೆಯಾದ ಶಿವಮಾರನ 'ಗಜಾಷ್ಟಕ', ಚಾವುಂಡರಾಯನ 'ಚಾವುಂಡರಾಯ ಪುರಾಣ' ಮುಂತಾದವು ಚಾರಿತ್ರಿಕ ವಿವರಣೆ ನೀಡುತ್ತವೆ.

ತುಮಕೂರು ಪ್ರದೇಶವು ಪ್ರಾಚೀನ ಕಾಲಕ್ಕೆ ಸಂಬಂಧಿಸಿದಂತೆ ತಲಕಾಡಿನ ಗಂಗರು, ರಾಷ್ಟ್ರಕೂಟರು, ನೊಳಂಬರು ಹಾಗೂ ಚೋಳರ ಆಡಳಿತಕ್ಕೆ ಒಳಪಟ್ಟಿರುವುದು ತಿಳಿಯುತ್ತದೆ. ಅದೇ ರೀತಿ ಮಧ್ಯಕಾಲೀನ ಅವಧಿಯಲ್ಲಿ ಹೊಯ್ಸಳರಿಂದ ಹಿಡಿದು ವಿಜಯನಗರ, ನಂತರ ಪಾಳೆಯಗಾರರು ಹಾಗೂ ಮೈಸೂರು ಒಡೆಯರ ಆಡಳಿತಕ್ಕೆ ಒಳಪಟ್ಟಿರುವುದು ವ್ಯಕ್ತವಾಗುತ್ತದೆ. ಆದರೆ ಈ ಪ್ರದೇಶದಲ್ಲಿ ರಾಜಮನೆತನಗಳು ಆಳ್ವಿಕೆ ನಡೆಸಿದ್ದರ ಬಗ್ಗೆ ಸಮಗ್ರ ಚಿತ್ರಣವನ್ನು ನೀಡುವಂತಹ ಇತಿಹಾಸ ಕೃತಿ ರಚನೆಯಾಗಿಲ್ಲವಾದರೂ ಕೆಲವು ಚರಿತ್ರೆಕಾರರು ತಮಗೆ ಲಭ್ಯವಾಗಿರುವ ಮಾಹಿತಿಗಳನ್ನು ಸಂಗ್ರಹಿಸಿ ತುಮಕೂರು ಪ್ರವೇಶದಲ್ಲಿನ ಈ ರಾಜಮನೆತನಗಳ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ವಿಚಾರಗಳನ್ನು ತಮ್ಮ ಕೃತಿ ಮತ್ತು ಲೇಖನಗಳಲ್ಲಿ ಪ್ರಕಟಿಸಿದ್ದಾರೆ. ಇವು ಶಾಸನ ಸಂಪುಟಗಳನ್ನು ಆಧರಿಸಿಯೇ ರಚನೆಯಾಗಿವೆ.

ತುಮಕೂರು ಪ್ರದೇಶದ ಅರಸೊತ್ತಿಗೆಯ ಇತಿಹಾಸ ಬಹುತೇಕವಾಗಿ ತಲಕಾಡಿನ ಗಂಗರ ಆಡಳಿತದಿಂದ ಪ್ರಾರಂಭವಾಗುತ್ತದೆ. ಅದಕ್ಕೂ ಮುಂಚೆ ಮೌರ್ಯ, ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತು ಎಂಬ ವಾದಗಳಿವೆ. ಆದರೆ ಅವರ ಆಡಳಿತದ ಬಗ್ಗೆ ಸ್ಪಷ್ಟ ಚಿತ್ರಣ ನೀಡುವಂತಹ ಯಾವುದೇ ದಾಖಲೆಗಳು ಲಭ್ಯವಾಗಿಲ್ಲ. ಗಂಗರು ಈ ಭಾಗದಲ್ಲಿ ಆಳ್ವಿಕೆ ನಡೆಸಿದ್ದರ ಬಗ್ಗೆ ಕೆಲವು ಕೃತಿಗಳಲ್ಲಿ ಉಲ್ಲೇಖಿತವಾಗಿದೆ. ಕೆ.ಅಭಿಶಂಕರರವರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್', ಬಿ.ಎಲ್.ರೈಸ್‌ರವರ 'ಮೈಸೂರು ಗೆಜೆಟಿಯರ್', ಸಂಪುಟ ೨, ಸಿ.ಎನ್.ಭಾಸ್ಕರಪ್ಪರವರ ಸಂಪಾದನದ 'ತುಮಕೂರು ಜಿಲ್ಲಾ ದರ್ಶನ', ಡಿ.ಎನ್.ಯೋಗೀಶ್‌ರವರ ಸಂಪಾದನದ 'ಜಯಮಂಗಲಿ' ಸ್ಮರಣಸಂಚಿಕೆ. ಬಿ. ನಂಜುಂಡಸ್ವಾಮಿರವರ ಸಂಪಾದನದ 'ಕಲ್ಪನಸಿರಿ', ದೇವರ ಕೊಂಡಾರೆಡ್ಡಿರವರ 'ತಲಕಾಡಿನ ಗಂಗರ ದೇವಾಲಯಗಳು' ಮುಂತಾದವು ಸಹಾಯಕವಾಗಿವೆ.

ಕನ್ನಡ ನಾಡಿನಲ್ಲಿ ಆಳ್ವಿಕೆ ನಡೆಸಿದ ರಾಜಮನೆತನಗಳ ಕುರಿತಾಗಿ ರಚನೆಯಾಗಿರುವ ಚಾರಿತ್ರಿಕ ಕೃತಿಗಳಲ್ಲಿ ತುಮಕೂರು ಪ್ರದೇಶದ ಉಲ್ಲೇಖನವಿದೆ. ಷೇಕ್ ಅಲಿರವರ 'ಕರ್ನಾಟಕ ಚರಿತ್ರೆ', ಸಂಪುಟ

೧, ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರ ಸಂಪಾದನ 'ಕರ್ನಾಟಕದ ಇತಿಹಾಸ ದರ್ಶನ', ಸೂರ್ಯನಾಥ ಕಾಮತ್‌ರವರ 'ಚರಿತ್ರೆ ಸಂಪುಟಗಳು' ಮೊದಲಾದವು ನೆರವಾಗಿವೆ.

ತಲಕಾಡಿನ ಗಂಗರಸರು ಕರ್ನಾಟಕದ ದಕ್ಷಿಣ ಮತ್ತು ಪೂರ್ವ ಭಾಗದ ಜಿಲ್ಲೆಗಳಲ್ಲಿ ಕ್ರಿ.ಶ.ದ ಆರಂಭದಿಂದ ೧೦೨೫ರವರೆಗೆ ಆಳ್ವಿಕೆ ನಡೆಸಿದರು. ಇವರು ತಲವನಪುರ ಅಥವಾ ತಲಕಾಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದರು. ಕ್ರಿ.ಶ.೪೦೦ರಲ್ಲಿ ತುಮಕೂರು ಪ್ರದೇಶವು ಗಂಗರ ಆಳ್ವಿಕೆಗೆ ಒಳಪಟ್ಟಿತು. ಈ ಬಗ್ಗೆ ೪ ತಾಮ್ರ ಶಾಸನಗಳು ಉಲ್ಲೇಖಿಸುತ್ತವೆ. ಇವುಗಳಲ್ಲಿ ಕ್ರಿ.ಶ.೪೦೦ ಸುಮಾರಿಗೆ ಸೇರಿದ ಶಾಸನವನ್ನು ಬರೆಸಿದವನು ಮಾಧವವರ್ಮ ಎಂಬ ಅರಸು. ಈ ಮಾಧವವರ್ಮನು ಪ್ರಾಯಶಃ ದಡಿಗ ದೊರೆಯ ಪುತ್ರನಾದ ಕಿರಿಯಮಾಧವ ಅಥವಾ ಎರಡನೇ ಮಾಧವನಿರಬಹುದು ಎಂಬ ಅಭಿಪ್ರಾಯ ಇತಿಹಾಸಕಾರರದು. ಈ ಮಾಧವರ್ಮ ಬೋಧಿಸತ್ವನೆಂಬ ಬೌದ್ಧ ಸನ್ಯಾಸಿಗೆ ಭೂಮಿಯನ್ನು ದಾನವಾಗಿ ನೀಡಿದನೆಂಬ ವಿಷಯವನ್ನು ಈ ಶಾಸನ ಉಲ್ಲೇಖಿಸುತ್ತದೆ. ಗಂಗರು ತುಮಕೂರು ಪ್ರದೇಶದಲ್ಲಿ ಆಳಿದುದರ ಬಗ್ಗೆ ಬೆಳಕು ಚೆಲ್ಲುವ ಮತ್ತೊಂದು ತಾಮ್ರಾಶಾಸನ ಕ್ರಿ.ಶ.೫೪೮ರಲ್ಲಿ ಬರೆಯಲ್ಪಟ್ಟಿದ್ದು ಈ ಶಾಸನ ಮಧುಗಿರಿ ತಾಲ್ಲೂಕಿನ ಕಡಗಟ್ಟೂರಿನ ಶ್ರೀಮಾನ್ ಶ್ರೀನಿವಾಸರಾವ್ ಇವರಲ್ಲಿ ದೊರೆತಿದೆ. ಈ ತಾಮ್ರುಶಾಸನ ಐದು ಹಾಳೆಗಳಿಂದ ಕೂಡಿದ್ದು ಸಮಕಾಲೀನ ಗಂಗರಸರು ಬೇರೆ ಬೇರೆ ಪ್ರಾಂತಗಳೊಂದಿಗೆ ಹೊಂದಿದ್ದ ಸಂಬಂಧಗಳ ಉಲ್ಲೇಖನವನ್ನು ಹೊಂದಿದೆ.[೨೬] ಇದು ಗಂಗರಾಜರ ವಂಶಾವಳಿಯ ಮತ್ತು ಬಿರುದುಗಳ ಬಗ್ಗೆಯೂ ಮಾಹಿತಿ ನೀಡುತ್ತದೆ. ನಂತರ ನವಕಾಮನ ಕಾಲಕ್ಕೆ ಸೇರಿದ ತಾಮ್ರ ಶಾಸನಗಳು ಹೆಬ್ಬೂರಿನಲ್ಲಿ ದೊರಕಿವೆ. ಈ ಶಾಸನದಿಂದ ಗಂಗರಸರ ಧರ್ಮಗುರು ಹಾಗೂ 'ಶಬ್ದಾವತಾರ' ಎಂಬ ಗ್ರಂಥದ ಕತೃವೂ ಆದ ಪೂಜ್ಯಪಾದನಿಂದ ದುರ್ವಿನೀತ ಅರಸು ವೇದಾಂತ ವಿದ್ಯೆಯನ್ನು ಕಲಿಯುವ ಬಗ್ಗೆ ನಿರ್ಬಂಧಿತನಾಗಿದ್ದನು ಎಂಬ ವಿಷಯವು ತಿಳಿದುಬರುತ್ತದೆ.[೨೭] ಇದರ ಸಹಾಯದಿಂದ ಗಂಗರಸರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತ್ತು ಎಂಬ ಅಂಶ ಸ್ಪಷ್ಟಪಡುತ್ತದೆ.

ಗಂಗರ ದೊರೆ ದುರ್ವಿನೀತನ ಕ್ರಿ.ಶ.೪೮೨ರ ಕಡಗತ್ತೂರು ತಾಮ್ರ ಶಾಸನವು ಈ ಜಿಲ್ಲೆಯ ಮೊದಲ ವೈಷ್ಣವ ಧರ್ಮ ಶಾಸನವಾಗಿದೆ. ಸ್ಕಂದಶರ್ಮ ಎಂಬುವರಿಗೆ ವಣ್ಣೆನಾಡಿನ ಪೆರುಕದ ಬಳಿಯ (ಯಣ್ಣೆ) ತಿಪ್ಪೆರೂರು ಎಂಬ ಗ್ರಾಮವನ್ನು ದಾನ ನೀಡಿದ ವಿಷಯ ಈ ಶಾಸನದಲ್ಲಿದೆ. ಈಗಿನ ನೆಲಮಂಗಲ ತಾಲ್ಲೂಕಿನ ಮಣ್ಣೆ ಗ್ರಾಮವೇ ಶಾಸನದಲ್ಲಿ ಉಲ್ಲೇಖಿತವಾಗಿರುವ ವಣ್ಣೆನಾಮ, ಪೆರುಕ ಎಂಬುದು ಈಗಿನ ಹುಲುಕಡಿ ಬೆಟ್ಟ ಪ್ರದೇಶ. ಈ ಹುಲುಕಡಿ ಬೆಟ್ಟದಲ್ಲಿರುವ ಪುರಾತನ ಅವಶೇಷಗಳು ಮೇಲಿನ ಅಂಶವನ್ನು ಸ್ಪಷ್ಟಕರಿಸುತ್ತದೆ ಎಂಬುದೂ ಯೋಗಿಶ್ ಸಂಪಾದನದ 'ಜಯಮಂಗಲಿ' ಸ್ಮರಣ ಸಂಚಿಕೆಯಲ್ಲಿ ಡಿ.ವಿ.ಪರಮಶಿವಮೂರ್ತಿಯವರ 'ತುಮಕೂರು ಜಿಲ್ಲಾ ಶಾಸನ ಸಮೀಕ್ಷೆ' ಲೇಖನದಲ್ಲಿ ಉಲ್ಲೇಖಿತವಾಗಿದೆ.

ತುಮಕೂರು ಪ್ರದೇಶವನ್ನು ಆಳಿದ ಗಂಗರಾಜರಲ್ಲಿ ಶ್ರೀಪುರುಷ ಅರಸನೇ ಮೊದಲನೆಯವನು ಎಂಬ ಉಲ್ಲೇಖನ ಕೆ.ಅಭಿಶಂಕರ ಸಂಪಾದಕತ್ವದ 'ತುಮಕೂರು ಜಿಲ್ಲಾ ಗೆಜೆಟಿಯರ್'ನಲ್ಲಿ ಇದೆ. ಶ್ರೀಪುರುಷನ ಆಳ್ವಿಕೆಯ ಬಗ್ಗೆ ತಿಳಿಸುವ ಶಾಸನಗಳು, ಅನೇಕ ವೀರಗಲ್ಲುಗಳು ದೊರೆತಿವೆ. ಇವನು ಕ್ರಿ.ಶ.೭೨೫ ರಿಂದ ೭೮೮ರವರೆಗೆ ಆಳಿದನೆಂದು ತಿಳಿದುಬರುತ್ತದೆ. ಕ್ರಿ.ಶ.೭೫೦ರಲ್ಲಿ ಬರೆಯಲ್ಪಟ್ಟ ಮಿಡಿಗೇಶಿ ಬಳಿ ದೊರೆತ ೯ನೇ ಶಾಸನ ತಿಳಿಸುವಂತೆ ರಟ್ಟರು ಅಥವಾ ರಾಷ್ಟ್ರಕೂಟರು ಗಂಗವಾಡಿ ಮೇಲೆ ದಂಡೆತ್ತಿ ಬಂದು ಯುದ್ಧ ಹೂಡಿದುದು ತಿಳಿಯುತ್ತದೆ. ಈ ಯುದ್ಧದಲ್ಲಿ ಜಡಿಯ ಮುತ್ತರಸನೆಂಬ ವಿರಾಗ್ರಣಿ ಹೋರಾಡಿ ಮಡಿದನು. ಈ ವಿಚಾರ ಅಲ್ಲಿ ದೊರೆತಿರುವ ವೀರಗಲ್ಲಿನಿಂದ ಸ್ಪಷ್ಟಪಡುತ್ತದೆ.[೨೮]

ತುಮಕೂರು ಪ್ರದೇಶವನ್ನು ಆಳಿದ ಗಂಗರು ಕ್ರಿ.ಶ.೪ನೆಯ ಶತಮಾನದಿಂದ ೧೧ನೇಯ ಶತಮಾನದವರೆಗೆ ಆಳ್ವಿಕೆ ನಡೆಸಿರುವುದು ಕಂಡುಬರುತ್ತದೆ. ಬಿ.ಎಲ್.ರೈಸ್, ಎಂ.ಶೇಷಾದ್ರಿಯವರು ಗಂಗರ ಶಾಸನಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಿದ್ದಾರೆ. ದೇವರ ಕೊಂಡಾರೆಡ್ಡಿಯವರು ಗಂಗರ ದೇವಾಲಯಗಳ ಕುರಿತು ಅಧ್ಯಯನ ಮಾಡಿ ಅವರ ಸಾಂಸ್ಕೃತಿಕ ಹಿರಿಮೆಯನ್ನು ವಿವರಿಸಿದ್ದಾರೆ. ಷೇಕ್ ಅಲಿ ಸಂಪಾದನದ 'ಕರ್ನಾಟಕ ಚರಿತ್ರೆ', ಸಂಪುಟ ೨ರಲ್ಲಿ ಗಂಗರು ಮತ್ತು ಅವರು ಬೇರೆ ರಾಜಮನೆತನದೊಂದಿಗೆ ಹೊಂದಿದ್ದ ಸಂಬಂಧಗಳ ಬಗ್ಗೆ ವಿವರಣೆ ನೀಡಿದ್ದಾರೆ. ಎಂ.ಎಸ್. ನಂಜುಂಡಸ್ವಾಮಿಯವರು 'ಕದಂಬ-ಗಂಗರ ಇತಿಹಾಸ' ಎಂಬ ಕೃತಿ ರಚಿಸಿ ಅವರ ರಾಜಕೀಯ, ಸಾಮಾಜಿಕ, ಧಾರ್ಮಿಕ, ಶಿಕ್ಷಣ, ಆರ್ಥಿಕ, ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ವಿಚಾರಗಳ ಕುರಿತು ಬೆಳಕು ಚೆಲ್ಲಿದ್ದಾರೆ. ಈ ಎಲ್ಲ ಕಲೆ ಮತ್ತು ವಾಸ್ತುಶಿಲ್ಪ ಮುಂತಾದ ಕೃತಿಗಳ ನೆರವಿನಿಂದ ತುಮಕೂರು ಪ್ರದೇಶದಲ್ಲಿ ಗಂಗರ ಆಡಳಿತದ ಬಗ್ಗೆ ತಿಳಿಯಲು ಸಹಾಯಕವಾಗಿದೆ.

ಗಂಗರ ಮೂಲದ ಬಗ್ಗೆ ಎಂ.ವಿ.ಕೃಷ್ಣರಾವ್ ತಮ್ಮ ಕೃತಿ 'ಕರ್ನಾಟಕ ಇತಿಹಾಸ ದರ್ಶನ'ದಲ್ಲಿ ವಿವರಿಸಿದ್ದಾರೆ. ದಡಿಗ ಮತ್ತು ಮಾಧವ ಸಹೋದರರು ಈ ಮನೆತನದ ಆಳ್ವಿಕೆಗೆ ಅಸ್ತಿಬಾರ ಹಾಕಿದರು. ರಾಜ್ಯವು ಸ್ಥಾಪಿತವಾದ ಕಾಲಕ್ಕೆ ಕುವಲಾಲ (ಕೋಲಾರ) ಅದರ ರಾಜಧಾನಿಯಾಗಿತ್ತು. ಕಾಲಾನಂತರದಲ್ಲಿ 'ತಳವನಪುರ' ಅಥವಾ ತಲಕಾಡು ರಾಜಧಾನಿಯಾಯಿತು. ನಂತರ ಶ್ರೀಪುರುಷನ ಆಡಳಿತದಲ್ಲಿ ಮಾನ್ಯಪುರ ಅಥವಾ ಮಣ್ಣೆ ಎಂಬಲ್ಲಿಗೆ ರಾಜಧಾನಿ ಬದಲಾಯಿತು. ಮಧಗಜೇಂದ್ರ ಗಂಗರ ರಾಜ ಲಾಂಛನವಾಗಿತ್ತು ಎಂಬ ಅಂಶ ಈ ಕೃತಿಯಿಂದ ಸ್ಪಷ್ಟಪಡುತ್ತದೆ.[೨೯] ಬಿ.ಎಲ್.ರೈಸ್‌ರವರು ಸುಮಾರು ೭೦ ಗಂಗರ ಶಾಸನಗಳನ್ನು ಸಂಗ್ರಹಿಸಿ ಅವರ ಆಡಳಿತದ ಬಗ್ಗೆ ವಿವರಣೆ ನೀಡಿದ್ದಾರೆ. ಕೆ.ಅಭಿಶಂಕರರವರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್'ನಲ್ಲಿ ತುಮಕೂರು ಪ್ರದೇಶದಲ್ಲಿ ಗಂಗರ ಆಳ್ವಿಕೆಯ ಪ್ರಾರಂಭ, ವಿಸ್ತರಣೆಯ ಬಗ್ಗೆ ತಿಳಿಸಿದ್ದಾರೆ.

ಗಂಗರು ಇಕ್ಷ್ವಾಕು (ಸೂರ್ಯ) ವಂಶದವರಾಗಿದ್ದು ಪದ್ಮನಾಭ ಎಂಬ ಅರಸನು ಆಯೋಧ್ಯೆಯನ್ನು ಆಳುತ್ತಿದ್ದಾಗ ತನ್ನಿಬ್ಬರು ಮಕ್ಕಳಿಗೆ ದಡಿಗ ಮತ್ತು ಮಾಧವರೆಂದು ಹೆಸರಿಟ್ಟು ಕಳುಹಿಸಿದನು. ಆಗ ಅವರಿಗೆ ರಾಜ್ಯಸ್ಥಾಪಿಸಲು ಸಿಂಹನಂದಿ ನೆರವಾದರು ಎಂದು ಎಚ್.ತಿಪ್ಪೇರುದ್ರಸ್ವಾಮಿರವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಹಾಗೂ ಎಂ.ವಿ.ಕೃಷ್ಣರಾವ್‌ರವರ ಸಂಪಾದನದ 'ಕರ್ನಾಟಕ ಇತಿಹಾಸ ದರ್ಶನ' ಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆ.

ಶ್ರೀಪುರುಷನು ಆಳುತ್ತಿದ್ದಾಗ ರಟ್ಟರು (ರಾಷ್ಟ್ರಕೂಟರು) ಗಂಗವಾಡಿಯ ವಿರುದ್ದ ತಿರುಗಿ ಬಿದ್ದರೆಂದು ಮಧುಗಿರಿ ಶಾಸನ ತಿಳಿಸುತ್ತದೆ. ಕ್ರಿ.ಶ.೭೬೦ರಿಂದ ಹಿಡಿದು ತನ್ನ ಆಳ್ವಿಕೆ ಅಂತ್ಯದವರೆಗೆ ಶ್ರೀಪುರುಷ ರಾಷ್ಟ್ರಕೂಟರ ದುರಾಕ್ರಮಣ ತಡೆಯಲು ಅವರೊಡನೆ ಯುದ್ಧ ಮಾಡಬೇಕಾಯಿತು. ಸಿಯಗೆಲ್ಲನು ಶ್ರಿಪುರುಷನ ದಳಪತಿಯಾಗಿ ರಾಷ್ಟ್ರಕೂಟರ ವಿರುದ್ಧ ಜರುಗಿದ ಸಮರಗಳಲ್ಲಿ ಪ್ರಮುಖ ಪಾತ್ರವಹಿಸಿದನು ರಾಷ್ಟ್ರಕೂಟರ ಕೃಷ್ಣನು ಕ್ರಿ.ಶ.೭೬೪ರಲ್ಲಿ ಗಂಗವಾಡಿಯ ಮೇಲೆ ಯುದ್ಧಹೂಡಿ ರಾಜಧಾನಿ ಮಾನ್ಯಪುರ ಅಥವಾ ಮಣ್ಣೆಯನ್ನು ಸ್ವಲ್ಪಕಾಲ ಹಿಡಿದನು ಎಂದು ಎಂ.ಎಸ್ .ನಂಜುಂಡಸ್ವಾಮಿ ತಮ್ಮ 'ಕದಂಬ-ಗಂಗರ ಇತಿಹಾಸ' ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.[೩೦] ಶ್ರೀಪುರುಷನು ಕ್ರಿ.ಶ.೭೭೫ಕ್ಕೆ ಮೊದಲೇ ತಲಕಾಡಿನಿಂದ ರಾಜಧಾನಿಯನ್ನು ಮಾನ್ಯಪುರಕ್ಕೆ ವರ್ಗಾಯಿಸಿರುವುದು ಕಂಡುಬರುತ್ತದೆ.

ಗಂಗರು ಮತ್ತು ರಾಷ್ಟ್ರಕೂಟರ ನಡುವೆ ಹತ್ತಿಕೊಂಡ ದ್ವೇಷಾಗ್ನಿಯು ರಣಾಗ್ನಿಯಾಗಿ ಉರಿಯತೊಡಗಿತೇ ವಿನಃ ಅದು ಶಾಂತವಾಗಲಿಲ್ಲ. ಈ ಯುದ್ಧಗಳು ಪಿಂಚನೂರು, ಕಾಗೆ ಮೊಗೆಯೂರು ಹಾಗೂ ಬಾಗೆಯೂರುಗಳ ಬಳಿ ನಡೆದವು ಬಾಗೆಯೂರು ಎಂಬುದು ಗುಬ್ಬಿಯಿಂದ ಈಶಾನ್ಯಕ್ಕೆ ಐದು ಕಿ.ಲೋ.ಮೀಟರ್ ದೂರದಲ್ಲಿರುವ ಬಾಗೂರು ಇರಬಹುದೆಂದು ಇತಿಹಾಸಜ್ಞರ ಅಭಿಪ್ರಾಯವಾಗಿದೆ. ಸರ್ವೆ ಸಾಮಾನ್ಯವಾಗಿ ಎಲ್ಲ ಶಾಸನಗಳು ಮತ್ತು ವೀರಗಲ್ಲುಗಳು ಗಂಗರು ಮತ್ತು ರಾಷ್ಟ್ರಕೂಟರ ನಡುವೆ ಸಾಮ್ರಾಜ್ಯ-ಸ್ವಾತಂತ್ರ್ಯ ರಕ್ಷಣೆಗಾಗಿ ನಡೆದ ಯುದ್ಧಗಳ ವರ್ಣನೆಗಳಿಂದಲೂ, ಚಿತ್ರಗಳಿಂದಲೂ ಕೂಡಿವೆ ಎಂಬ ಅಂಶ ಸಿ.ಎನ್.ಬಾಸ್ಕರಪ್ಪರವರ ಸಂಪಾದನದ 'ತುಮಕೂರು ಜಿಲ್ಲಾದರ್ಶನ'ದಲ್ಲಿ ಉಲ್ಲೇಖಿಸಲಾಗಿದೆ.[೩೧] ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್' ಇದೇ ಅಂಶವನ್ನು ಪುಷ್ಠೀಕರಿಸುತ್ತದೆ. ಒಟ್ಟಿನಲ್ಲಿ ಈ ಎಲ್ಲ ದಾಖಲೆಗಳು ಗಂಗರು ಸಾಮ್ರಾಜ್ಯ ರಕ್ಷಣೆಗೆ ಅನುಸರಿದ ಮಾರ್ಗಗಳನ್ನು ಸೂಚಿಸುತ್ತವೆ.

ತುಮಕೂರು ಜಿಲ್ಲೆಯಲ್ಲಿ ಗಂಗರಸರ ಆಡಳಿತದ ವಿಚಾರವಾಗಿ ಶಾಸನ ಸಂಪುಟಗಳು ಸ್ಥೂಲ ವಿವರಣೆ ಒದಿಗಸಿವೆ. ತಿಪಟೂರು ಬಳಿ ದೊರೆತಿರುವ ಕ್ರಿ.ಶ.೯೭೨ರ ಸುಮಾರಿನ ೧೦೨ನೇಯ ಶಾಸನ ಗಂಗರಸರ ಪ್ರಾಬಲ್ಯ ಮತ್ತು ನೊಳಂಬರ ಅವನತಿಯ ಬಗ್ಗೆ ತಿಳಿಸುತ್ತವೆ. ಸತ್ಯವಾಕ್ಯನೆಂಬ ಗಂಗದೊರೆ ನೊಳಂಬರ ಮೇಲೆ ಪ್ರಭುತ್ವ ಪಡೆದು 'ನೊಳಂಬ ಕುಲಾಂತಕ' ಎಂಬ ಬಿರುದು ಧರಿಸುವುದು

ತಿಳಿದುಬರುತ್ತದೆ.[೩೨] ಇದರಿಂದ ಕ್ರಿ.ಶ.೯೬೦ರಿಂದ ಕ್ರಿ.ಶ.೯೭೪ರವರೆಗೆ ಆಳಿದ ಗಂಗವಾಡಿಯ ಪ್ರಬಲ ಅರಸ ಮೂರನೆಯ ಮಾರಸಿಂಹನ ವಿಷಯವನ್ನು ನೆನಪಿಸುತ್ತದೆ.

ರಾಷ್ಟ್ರಕೂಟರ ಅರಸ ಕೃಷ್ಣನು ಗಂಗವಾಡಿಯ ಮೇಲೆ ಅಭಿಯೋಗ ಹೊರಟ ಈ ಸಮಯದಲ್ಲಿ ಗಂಗವಾಡಿಯ ಅರಸ ಶ್ರೀಪುರುಷನ ಸೈನ್ಯ ಹಾಗೂ ದೇಶಾಭಿಮಾನಿಗಳಾದ ಗಂಗರ ಆಸ್ಥಾನಕವಿಗಳೂ ತಮ್ಮ ಕಾವ್ಯ ಕಲಾಪವನ್ನು ಬಿಟ್ಟು ರಣರಂಗಕ್ಕೆ ನಡೆದರು, ಆದರೂ ಶ್ರೀಪುರುಷನು ಸೋತನು. ರಾಜಧಾನಿ ಮಾನ್ಯಪುರ ಅಥವಾ ಮಣ್ಣೆ ರಾಷ್ಟ್ರಕೂಟರ ವಶವಾಯಿತು. ರಾಷ್ಟ್ರಕೂಟ ಅರಸ ಕೃಷ್ಣನು ಸುಸಂಸ್ಕೃತ ರಾಜನಾಗಿದ್ದು, ವಶವಾದ ಗಂಗರ ರಾಜಧಾನಿಯ ನಾಶಕ್ಕೆ ಕೈಹಾಕದೆ ಗಂಗವಾಡಿಯ ಸಮಸ್ತ ರಾಜ್ಯವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಳ್ಳದೆ ಅದರ ಒಂದು ಭಾಗಕ್ಕೆ ಶ್ರೀಪುರುಷನನ್ನೆ ಮಾಂಡಲೀಕನನ್ನಾಗಿ ನಿಯೋಜಿಸಿ ಕ್ರಿ.ಶ.೭೬೮ರಲ್ಲಿ ತನ್ನ ರಾಜಧಾನಿಗೆ ಮರಳಿದ ಎಂಬುದಾಗಿ ಷೇಕ್ ಅಲಿರವರ ಸಂಪಾದನದ ಕರ್ನಾಟಕ ಚರಿತ್ರೆ, ಸಂಪುಟ ೨ರಲ್ಲಿ ಉಲ್ಲೇಖಿತವಾಗಿದೆ.[೩೩] ಇದನ್ನೆ ಗೆಜೆಟಿಯರ್‌ನಲ್ಲೂ ತಿಳಿಸಲಾಗಿದೆ. ಇದನ್ನು ಗಮನಿಸಿದಾಗ ತುಮಕೂರು ಪ್ರದೇಶದಲ್ಲಿ ಪ್ರಭುತ್ವ ಸ್ಥಾಪನೆಗಾಗಿ ಗಂಗರು ಮತ್ತು ರಾಷ್ಟ್ರಕೂಟರ ನಡುವೆ ಸೆಣಸಾಟ ನಡೆದಿರುವುದು ವ್ಯಕ್ತವಾಗುತ್ತದೆ. ಶ್ರೀಪುರುಷನ ಕಾಲದಲ್ಲಿ ತುಮಕೂರು ಪ್ರದೇಶ ಗಂಗರ ಆಡಳಿತಕ್ಕೆ ಒಳಪಟ್ಟಿರುವುದು ಸ್ಪಷ್ಟಪಡುತ್ತದೆ. ಈ ಭಾಗದಲ್ಲಿ ದೊರೆತಿರುವ ಹಲವಾರು ಶಾಸನಗಳು, ವೀರಗಲ್ಲುಗಳು, ದೇವಾಲಯಗಳು ಅವರ ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಬೆಳವಣಿಗೆ ಕುರಿತು ಸ್ಪಷ್ಟ ಚಿತ್ರಣ ನೀಡುತ್ತವೆ.

ಶ್ರೀಪುರುಷನು ರಾಷ್ಟ್ರಕೂಟರ ಸಾರ್ವಭೌಮತ್ವವನ್ನು ಒಪ್ಪಿಕೊಂಡಿದ್ದು ಸರ್ವವಿಧಿತ. ಆದರೆ ಶ್ರೀಪುರುಷನ ನಂತರ ಅಧಿಕಾರಕ್ಕೆ ಬಂದ ಅವನ ಮಗ ಎರಡನೆಯ ಶಿವಮಾರ ರಾಷ್ಟ್ರಕೂಟರ ಪ್ರಭುತ್ವವನ್ನು ಒಪ್ಪಿಕೊಳ್ಳದೇ ಪ್ರತಿರೋಧ ತೋರಿದ. ಕಳೆದು ಹೋದ ಸಾಮ್ರಾಜ್ಯವನ್ನು ಮರಳಿ ಪಡೆಯುವುದಕ್ಕೆ ಮುಂದಾದನು. ಈ ನಿಲುವಿನಿಂದ ಕೆರಳಿದ ಧ್ರುವನು ಅವನ ಮೇಲೆ ದಂಡೆತ್ತಿ ಹೋಗಿ ಎರಡನೇ ಶಿವಮಾರನನ್ನು ಸೋಲಿಸಿ ಸೆರೆ ಹಿಡಿದು ಗಂಗರಾಜ್ಯವನ್ನು ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ವಿಲೀನಗೊಳಿಸಿಕೊಂಡನು. ಆದರೆ ಧ್ರುವನ ನಂತರ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ಅಧಿಕಾರಕ್ಕೆ ಬಂದ ಮೂರನೇ ಗೋವಿಂದ ಗಂಗರ ಸಹಾನುಭೂತಿಯನ್ನು ಗಳಿಸುವ ಭಾವನೆ ಹೊಂದಿ ಎರಡನೇ ಶಿವಮಾರನನ್ನು ಬಿಡುಗಡೆ ಮಾಡಿದ ಎಂಬುದಾಗಿ ಬಿ.ಷೇಕ್ ಅಲಿಯವರ 'ಕರ್ನಾಟಕ ಚರಿತ್ರೆ' ಸಂಪುಟ-೨ರಲ್ಲಿ ತಿಳಿಸಲಾಗಿದೆ. ಕೆ.ಆರ್.ನರಸಿಂಹರವರು ಚೋಳರು ಗಂಗರನ್ನು ಸೋಲಿಸುವುದರ ಮೂಲಕ ಮಾಂಡಲೀಕರನ್ನಾಗಿ ಮಾಡಿಕೊಂಡರು. 'ನೀಲಕರಿ ಚೋಳಮಂಡಲ' ಎಂಬ ರಾಜ್ಯವನ್ನು ಕಟ್ಟಿದರು ಎಂಬ ಅಂಶ ಆರ್.ಗೋಪಾಲರ ಸಂಪುಟದ ಲೇಖನಗಳಿಂದ ತಿಳಿದುಬರುತ್ತದೆ.[೩೪] ಮಾಗಡಿ ತಾಲ್ಲೂಕು ಕುಪ್ಪೆಪಾಳ್ಯದಲ್ಲಿ ದೊರೆತಿರುವ ಶಾಸನದ ಪ್ರಕಾರ ಗಂಗರ ಎರಡನೆಯ ಶಿವಕುಮಾರ ಕುಣಿಂಗಿಲ್(ಕುಣಿಗಲ್) ನಾಡಿನ ರಾಜ್ಯಪಾಲನಾಗಿದ್ದ[೩೫] ಎಂಬುದಾಗಿ ಜಯರಾಮಶೆಟ್ಟಿಯವರ ಲೇಖನದಿಂದ ತಿಳಿಸುತ್ತದೆ.

ಶಿವಮಾನರನ ಮರಣಾನಂತರ ಗಂಗಶಾಖೆಯಲ್ಲಿ ವಿಜಯಾದಿತ್ಯನ ಮಗ ರಾಜಮಲ್ಲನು ಕ್ರಿ.ಶ.೮೧೮ರಲ್ಲಿ ಅಧಿಕಾರಕ್ಕೆ ಬಂದನು. ಇವನು ಗತಕಾಲದ ಗಂಗರಾಜ್ಯವನ್ನು ಮರಳಿ ಗಳಿಸಲು ಪಣತೊಟ್ಟನು. ರಾಜಮಲ್ಲನ ಸ್ವಾತಂತ್ರ್ಯ ಪ್ರಯತ್ನದಿಂದ ಅಮೋಘವರ್ಷನ ಕಣ್ಣು ಕೆಂಪಾಯಿತು. ಅಮೋಘವರ್ಷನ ಸೇನಾನಿ ಬಂಕೇಶನು ಒಡೆಯನ ಆಜ್ಞೆಯಂತೆ ಗಂಗರಾಜ್ಯಕ್ಕೆ ದಂಡೆತ್ತಿ ಬಂದು ದುರ್ಗಮವಾದ ಕೈದಾಳ(ತುಮಕೂರ ಬಳಿಯ ಕೈದಾಳ) ದುರ್ಗವನ್ನು ವಶಪಡಿಸಿಕೊಂಡನು.[೩೬] ಹೀಗೇ ಗಂಗರು, ರಾಷ್ಟ್ರಕೂಟರು, ನೊಳಂಬರು, ಚೋಳರು, ಬಾಣರೊಂದಿಗೆ ಹೋರಾಡಿರುವುದು ಸ್ಪಷ್ಟಪಡುತ್ತದೆ.

ಗಂಗರು ಸಾಂಸ್ಕೃತಿಕ ಕ್ಷೇತ್ರಕ್ಕೂ ಹೆಚ್ಚಿನ ಮನ್ನಣೆ ನೀಡಿದ್ದರು ಎಂಬುದು ದೇವರಸ ಕೊಂಡಾರೆಡ್ಡಿಯವರ 'ತಲಕಾಡಿನ ಗಂಗರ ದೇವಾಲಯಗಳು' ಕೃತಿಯಿಂದ ತಿಳಿದುಬರುತ್ತದೆ. ಇದರ ಜೊತೆಗೆ ಬಿ.ಷೇಕ್ ಅಲಿಯರ 'ಕರ್ನಾಟಕ ಚರಿತ್ರೆ' ಸಂಪುಟ ೨ರಲ್ಲಿ, ಡಿ.ಎನ್.ಯೋಗೀಶ್‌ರವರ 'ಜಯಮಂಗಲಿ' ಸ್ಮರಣ' ಸಂಚಿಕೆ, ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್', ಎಂ.ಎಸ್. ನಂಜುಂಡಸ್ವಾಮಿಯವರ 'ಕದಂಬ-ಗಂಗರ ಇತಿಹಾಸ', ಕೃತಿಗಳು ಗಂಗರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ, ಕಲೆ ಮತ್ತು ವಾಸ್ತು ಶಿಲ್ಪದಂತಹ ವಿಚಾರಗಳನ್ನು ಕುರಿತದ್ದಾಗಿವೆ.

ಅರಳಗುಪ್ಪೆಯ (ತಿಪಟೂರು ತಾಲ್ಲೂಕು) ಕಲ್ಲೇಶ್ವರ ದೇವಾಲಯ, ಕುಣಿಗಲ್‌ನ ಸೋಮೇಶ್ವರ ದೇವಾಲಯ, ತಂಗಡದ ಮಲ್ಲೇಶ್ವರ ದೇವಾಲಯ, ನೊಣವಿನಕೆರೆ ನೊಣಬೇಶ್ವರ, ಶಾಂತಿಕೇಶ್ವರ, ಗರ್ಗೇಶ್ವರ, ಚೋಳೇಶ್ವರ, ಕಲ್ಲೇಶ್ವರ, ಹುಲಿಕಲ್ ಹಂಸೇಶ್ವರ, ಮಧುಗಿರಿ ತಾಲ್ಲೂಕಿನ ಶ್ರಾವಂಡ ಹಳ್ಳಿಯ ಉದ್ಭವಲಿಂಗ ಮುಂತಾದ ಗಂಗರ ಕಾಲದ ದೇವಾಲಯಗಳ ಬಗ್ಗೆ ದೇವರಕೊಂಡಾರೆಡ್ಡಿಯವರ 'ತಲಕಾಡಿನ ಗಂಗರ ದೇವಾಲಯಗಳು' ಎಂಬ ಕೃತಿಯಲ್ಲಿ ತಿಳಿಸಲಾಗಿದೆ. ಅರಳಗುಪ್ಪೆ ಕಲ್ಲೇಶ್ವರ ದೇವಾಲಯದ ಬಗ್ಗೆ ಬಿ.ಷೇಕ್ ಅಲಿರವರು ಇದು ಗಂಗರ ಸುಂದರ ಶಿಲ್ಪವಾಗಿದೆ ಎಂಬುದಾಗಿ ವರ್ಣಿಸಿದ್ದಾರೆ. ಆದರೆ ಎಂ.ಎಸ್.ಕೃಷ್ಣಮೂರ್ತಿ ಈ ದೇವಾಲಯ ನೊಳಂಬರ ಕಾಲದೆಂದು ಉಲ್ಲೇಖಿಸಿದ್ದಾರೆ.

ಹಿರೇಗುಂಡಗಲ್ಲಿನಲ್ಲಿ ಗಂಗರ ಶ್ರೀಪುರುಷನ ಕಾಲದ ಅನೇಕ ವೀರಗಲ್ಲುಗಳು ದೊರೆತಿವೆ. ತಿಪಟೂರು ತಾಲ್ಲೂಕು ಕಿಬ್ಬನಹಳ್ಳಿ ಕ್ರಾಸ್‌ನಲ್ಲಿ ಅಂಜನೇಯ ದೇವಾಲಯದ ಬಳಿ ಗಂಗರ ಕಾಲದ ಕಂಬಗಳು ದೊರೆತಿವೆ ಹೊನ್ನುಡುಕೆಯ ಬಳಿಯ ಜಲಗಾರ ದಿಬ್ಬದಲ್ಲಿ ಗಂಗರಕಾಲದ ಇಟ್ಟಿಗೆ ಅಡಿಸ್ಥಾನವಿದೆ. ಇದೇ ಭಾಗದಲ್ಲಿ ಶ್ರೀವಿಕ್ರಮನ ಶಿಲಾಶಾಸನ ದೊರೆತಿದೆ ಎಂಬ ಈ ಎಲ್ಲಾ ಅಂಶಗಳನ್ನು ದೇವರಕೊಂಡಾರೆಡ್ಡಿಯವರ 'ತಲಕಾಡಿನ ಗಂಗರ ದೇವಾಲಯಗಳು' ಎಂಬ ಕೃತಿ ಒಳಗೊಂಡಿದೆ.[೩೭]

ಗಂಗರಾಜ್ಯದ ಬಗ್ಗೆ ಹಲವಾರು ಕೃತಿಗಳು ರಚನೆಯಾಗಿವೆ. ಆದರೆ ತುಮಕೂರು ಪ್ರದೇಶದಲ್ಲಿ ಗಂಗರಾಜ್ಯದ ವಿಸ್ತರಣೆ ಕುರಿತು ಸಮಗ್ರ ಚಿತ್ರಣ ನೀಡುವ ಕೃತಿ ಪ್ರಕಟಣೆಗೊಂಡಿಲ್ಲ. ಗಂಗರ ರಾಜಕೀಯ

ಚರಿತ್ರೆ ಬಗ್ಗೆ ಬಂದಿರುವ ಕೆ.ಅಭಿಶಂಕರರವರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್', ಎಸ್. ಯೋಗೀಶ್‌ರವರ 'ಜಯಮಂಗಲಿ' ಸ್ಮರಣ ಸಂಚಿಕೆ, ಸಿ.ಎನ್.ಭಾಸ್ಕರಪ್ಪರವರ ಸಂಪಾದನದ 'ತುಮಕೂರು ಜಿಲ್ಲಾ ದರ್ಶನ' ಇವು ಕೇವಲ ರಾಜಕೀಯ ಚಿತ್ರಣ ನೀಡುತ್ತವೆ. ಈ ಪ್ರದೇಶದಲ್ಲಿನ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಕಲೆ ಮತ್ತು ವಾಸ್ತು ಕ್ಷೇತ್ರಗಳ ಕುರಿತು ಏನನ್ನೂ ಹೇಳದಾಗಿವೆ ಬೇರೆ ವಿದ್ವಾಂಸರುಗಳಾದ ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರು ಗಂಗರ ರಾಜ್ಯ ತುಮಕೂರು ಪ್ರದೇಶದ ವ್ಯಾಪ್ತಿಯನ್ನು ಹೊಂದಿತ್ತು ಎಂಬುದನ್ನು 'ಕರ್ನಾಟಕ ಇತಿಹಾಸ ದರ್ಶನ' ಕೃತಿಯಲ್ಲಿ ಗುರುತಿಸಿದ್ದಾರೆ. ಬಿ.ಷೇಕ್‌ಅಲಿಯವರ 'ಪಶ್ಚಿಮದ ಗಂಗರು', 'ಕರ್ನಾಟಕ ಚರಿತ್ರೆ', ಸಂಪುಟ ೨ರಲ್ಲಿ ತಲಕಾಡಿನ ಗಂಗರ ಹೆಚ್ಚಿನ ವಿವರ ನೀಡುವ ಪ್ರಯತ್ನ ನಡೆಸಿದರೂ ಸಹ ತುಮಕೂರು ಪ್ರದೇಶದ ಆಡಳಿತದ ಬಗ್ಗೆ ನಿರ್ಲಕ್ಷ್ಯ ಮಾಡಲಾಗಿದೆ. ಒಟ್ಟಾರೆ ಗಂಗರ ಕಾಲಕ್ಕೆ ಸಂಬಂಧಿಸಿದಂತೆ ದೊರಕುವ ಲಿಖಿತ ಮತ್ತು ಅಲಿಖಿತ ದಾಖಲೆಗಳನ್ನು ಶೋಧಿಸಿ ವಿದ್ವಾಂಸರುಗಳು ತುಮಕೂರು ಪ್ರದೇಶದಲ್ಲಿ ಗಂಗರಸರ ಆಳ್ವಿಕೆ ಮೇಲೆ ಮತ್ತಷ್ಟು ಬೆಳಕು ಚೆಲ್ಲಬೇಕಿದೆ.

**ರಾಷ್ಟ್ರಕೂಟರು :** ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದಂತೆ ಅಂದಿನ ಹಲವಾರು ಸಮಕಾಲೀನ ಕೃತಿಗಳು ಲಭ್ಯವಾಗಿವೆ. ಶ್ರೀವಿಜಯನ 'ಕವಿರಾಜಮಾರ್ಗ', ಅಮೋಘವರ್ಷನ 'ಪ್ರಶ್ನೋತ್ತರ ಮಾಲಿಕಾ' ಮಹಾವೀರ ಚಾರ್ಯರ 'ಗಣಿತಸಾರ ಸಂಗ್ರಹ', ಶಕಟಾಯನನ 'ಶಬ್ದಾನುಶಾಸನ', ಜಿನಸೇನನ 'ಆದಿಪುರಾರಣ', ಪ್ರಭಾಚಂದ್ರನ 'ಪ್ರಮೇಯ ಕಮಲ', ಹಲಾಯುದನ 'ಕವಿ ರಹಸ್ಯ', ಮೊದಲಾದವು ರಾಷ್ಟ್ರಕೂಟರ ಆಡಳಿತ ಕುರಿತು ತಿಳಿಸುತ್ತವೆ.[೩೮]

ದಕ್ಷಿಣ ಭಾರತದಲ್ಲಿ ಕ್ರಿ.ಶ.೬ನೇ ಶತಮಾನದಿಂದ ೮ನೇ ಶತಮಾನದವರೆಗೂ ಆಳಿ-ಬಾಳಿ ತಮ್ಮ ಕೀರ್ತಿಧ್ವಜವನ್ನು ಉತ್ತರ ಭಾರತದ ಶ್ರೀಹರ್ಷನಿಗೆ ಪರಿಚಯ ಮಾಡಿದ, ಬಾದಾಮಿ ಚಾಲುಕ್ಯರನ್ನು ಕುರಿತು ಶಾಸನಗಳಾಗಲಿ, ವೀರಗಲ್ಲು, ತಾಮ್ರಪತ್ರಗಳಾಗಲಿ ತುಮಕೂರು ಜಿಲ್ಲೆಯಲ್ಲಿ ದೊರೆತಿಲ್ಲ. ಬಾದಾಮಿ ಚಾಲುಕ್ಯರ ಉತ್ತರಾಧಿಕಾರಿಗಳಾಗಿ ರಾಷ್ಟ್ರಕೂಟರು ಕ್ರಿ.ಶ.೭೫೩ ರಿಂದ ೯೭೩ರವರೆಗೆ ಕರ್ನಾಟಕದ ಅನೇಕ ಭಾಗಗಳಲ್ಲಿ ಆಡಳಿತ ನಡೆಸಿದರು. ಕರ್ನಾಟಕದ ರಾಜಮನೆತನಗಳಲ್ಲಿ ರಾಷ್ಟ್ರಕೂಟರು ಪ್ರಮುಖರಾಗಿದ್ದಾರೆ. ಇವರ ರಾಜಧಾನಿ ಗುಲ್ಬರ್ಗಾ ಜಿಲ್ಲೆಯ ಮಾನ್ಯಖೇಟ ಅಥವಾ ಮಳಖೇಡ ದಂತಿದುರ್ಗ ಇವರ ಪ್ರಥಮ ಅರಸನಾಗಿದ್ದನು. ಇವನು ಕ್ರಿ.ಶ.೭೫೩ರಲ್ಲಿ ಬಾದಾಮಿ ಚಾಲುಕ್ಯರ ಕೊನೆಯ ಅರಸ ಎರಡನೇ ಕೀರ್ತಿವರ್ಮನನ್ನು ಸೋಲಿಸುವುದರೊಂದಿಗೆ ರಾಷ್ಟ್ರಕೂಟ ಪ್ರಭುತ್ವ ಸ್ಥಾಪಿಸಿದ. ರಾಷ್ಟ್ರಕೂಟರು ಸ್ಥಳೀಯ ರಾಜರಾಗಿದ್ದು, ಎರಡು ಶತಮಾನಗಳ ಕಾಲ ವೈಭವದಿಂದ ಆಳಿದರು.[೩೯]

ತುಮಕೂರು ಜಿಲ್ಲೆಯಲ್ಲಿ ರಾಷ್ಟ್ರಕೂಟರನ್ನು ಕುರಿತ ಶಾಸನಗಳು ಕೇವಲ ಮೂರುಮಾತ್ರ ದೊರೆತಿವೆ. ಅವುಗಳಲ್ಲಿ ಗುಬ್ಬಿಯ ೬೧ನೇ ಶಾಸನವು ಇತಿಹಾಸ ಮಹತ್ವ ಪಡೆದಿದೆ. ಈ ಶಾಸನ

ರಚನೆಯು ಕೆಲವಾರು ತಾಮ್ರಪತ್ರಗಳ ಒಂದು ತೆಕ್ಕೆ(ಗುಂಪಿನಲ್ಲಿ)ಯಾಗಿ ದೊರೆತಿದೆ. ಈ ಗುಬ್ಬಿ ತಾಲ್ಲೂಕಿನ ಕಡಬದ ಬಳಿ ಸೇತುವೆ ನಿರ್ಮಾಣಕ್ಕಾಗಿ ಅಡಿಪಾಯ ಅಗೆಯುತ್ತಿದ್ದಾಗ ಈ ತಾಮ್ರಪತ್ರಗಳ ಶಾಸನ ಗುಂಪಾಗಿ ದೊರೆಯಿತು. ಈ ಶಾಸನಗಳನ್ನು ಸಂಕೇತಿಸಿ ಸಂಪಾದಿಸಿ ಲೂಯಿರೈಸ್ ರವರು ಪ್ರಕಾಶಗೊಳಿಸಿದರು. ಇದೆ ಶಾಸನವನ್ನೆ ಮತ್ತೆ ಸಂಶೋಧಸಿ ಪರಿಷ್ಕರಿಸಿ ಲೂಡರ್‌ರವರು ಎಫಿಗ್ರಾಫಿಕಾ ಕರ್ನಾಟಕ ವ್ಯಾಲೂಂ ೪ ಪುಟ ೩೩೨ರಲ್ಲಿ ಮತ್ತೊಮ್ಮೆ ಪ್ರಕಾಶ ಪಡಿಸಿದರು. ಈ ಶಾಸನ ರಾಷ್ಟ್ರಕೂಟರ ಚರಿತ್ರೆಯ ಮೇಲೆ ಹೊಸ ಬೆಳಕು ಚೆಲ್ಲುತ್ತದೆ. ಅಕಾಲವರ್ಷನೆಂಬ ರಾಜನು ಕಟ್ಟಿಸಿದ ಅಮೋಘ ದೇವಾಲಯದ ವಿವರಣೆ ಈ ಶಾಸನದಲ್ಲಿದೆ. ಈ ದೇವಾಲಯವನ್ನು ದೊರೆಯು ತನ್ನದೇ ಆದ ಕನ್ನೇಶ್ವರ ಎಂಬ ಹೆಸರಿನಿಂದ ಕರೆದನು. ಈ ಕನ್ನೇಶ್ವರನು ಕ್ರಿ.ಶ.೭೫೬-೭೭೫ವರೆಗೆ ಆಳಿದ ರಾಷ್ಟ್ರಕೂಟರ ಒಂದನೇ ಕೃಷ್ಣ. ಇವನು ನಿರ್ಮಿಸಿದ ಎಲ್ಲೋರದ ಕೈಲಾಸ ದೇವಾಲಯವೇ ಈ ಶಾಸನದಲ್ಲಿ ಹೆಸರಿಸಲ್ಪಟ್ಟ ದೇವಾಲಯವೆಂದು ಊಹಿಸಲಾಗಿದೆ.[೪೦] ಇದೇ ಶಾಸನದಲ್ಲಿ ಚಾಲುಕ್ಯರ ಬಗ್ಗೆ ಉಲ್ಲೇಖನವಿದೆ. ಚಾಲುಕ್ಯರ ಬಾಲವರ್ಮ, ಅವನ ಮಗ ಯಶೋವರ್ಮ ಅವನ ಮಗ ವಿಮಲಾದಿತ್ಯರ ಬಗ್ಗೆ ವಿವರಣೆಗಳಿವೆ. ವಿಮಲಾದಿತ್ಯನು ಚಾಕಿ ರಾಜನೆಂದು ಪ್ರಸಿದ್ಧನಾಗಿ ಗಂಗಮಂಡಲಕ್ಕೆಲ್ಲಾ ಅದಿರಾಜನಾದನು ಇವನು ರಾಷ್ಟ್ರಕೂಟರಿಂದ ಗಂಗರಾಜ್ಯಕ್ಕೆ ನೇಮಕವಾಗಿದ್ದ ಒಬ್ಬ ವೈಸ್ರಾಯಿ ಆಗಿದ್ದಿರಬೇಕು ಮತ್ತು ಗಂಗದೊರೆ ಶಿವಮಾರನನ್ನು ಕ್ರಿ.ಶ.೭೮೧ರಲ್ಲಿ ಬಂದಿಸಿರಬೇಕು. ಯಶೋವರ್ಮನ ಮಗನಾದ ವಿಮಲಾದಿತ್ಯನು ಕುಣಿಗಲ್ ದೇಶದ ಗೌರ್ನರ್ (ಇಂದಿನ ಕುಣಿಗಲ್ಲು) ಆಗಿದ್ದನು. ಈ ಪ್ರದೇಶ ಅಂದು ೫೦೦ ವರಹಗಳ ಪ್ರಾಂತ್ಯವಾಗಿತ್ತು.[೪೧] ೬೧ನೇ ಶಾಸನ ಈ ಮಹತ್ವದ ದಾಖಲೆ ಹೊಂದಿರುವುದನ್ನು 'ಜಯಮಂಗಲಿ' ಸ್ಮರಣ ಸಂಚಿಕೆ ಮತ್ತು 'ತುಮಕೂರು ಜಿಲ್ಲಾದರ್ಶನ'ದಲ್ಲಿ ವಿವರಿಸಲಾಗಿದೆ.

ಗಂಗರ ಪ್ರಬಲತೆ ಮುರಿಯಲು ರಾಷ್ಟ್ರಕೂಟ ಅರಸ ಕೃಷ್ಣನು ಗಂಗವಾಡಿ ಮೇಲೆ ಆಕ್ರಮಣ ನಡೆಸಿದ. ಆಗ ಗಂಗವಾಡಿಯ ಅರಸ ಶ್ರೀಪುರುಷ ವೃದ್ಧನಾಗಿದ್ದನಲ್ಲದೆ ಗಂಗರ ಚರಿತ್ರೆ ಅಸಮರ್ಥತೆಯಲ್ಲಿರುವಂತೆ ಕಾಣುತ್ತಿತ್ತು. ಹೀಗಾಗಿ ಶ್ರೀಪುರುಷ ಸೋತನು ಅವನ ರಾಜಧಾನಿ ಮಾನ್ಯಪುರವು ಕೃಷ್ಣನ ವಶವಾಯಿತು. ಅಲ್ಲದೆ ಗಂಗವಾಡಿ ಸಮಸ್ತ ಭಾಗವನ್ನು ಗೆದ್ದು ಶ್ರೀಪುರುಷನನ್ನೆ ಮಾಂಡಲೀಕನನ್ನಾಗಿ ನೆಲೆಗೊಳಿಸಿ ಕ್ರಿ.ಶ.೭೬೯ ತನ್ನ ರಾಜಧಾನಿಗೆ ಮರಳಿದನು ಎಂಬ ಅಂಶವನ್ನು ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರು ಹೇಳಿದ್ದಾರೆ.[೪೨] ಗಂಗರು ಹೆಚ್ಚು ದುಸ್ಸಾದ್ಯರೆನಿಸಿದ್ದರು, ಅವರ ರಾಜ ಶ್ರೀಪುರುಷನು ಕೃಷ್ಣನಿಗೆ ಸೋತಿದ್ದು ನಿಜ ಆದರೆ ಅವನ ಮಗ ಶಿವಮಾರ (ಎರಡನೇ ಶಿವಮಾರ) ರಾಷ್ಟ್ರಕೂಟರ ಪ್ರಭುತ್ವವನ್ನು ಒಪ್ಪಿಕೊಳ್ಳದಾದನು. ಈ ನಿಲುವಿನಿಂದ ಕೆರಳಿದ ಧ್ರುವನು ಅವನ ಮೇಲೆ ದಂಡೆತ್ತಿ ಹೋಗಿ ಶಿವಮಾರನನ್ನು ಸೋಲಿಸಿ ಸೆರೆ ಹಿಡಿದು ಗಂಗರಾಜ್ಯವನ್ನ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ವಿಲೀನಗೊಳಿಸಿದ ತನ್ನ ಮಗ ಸ್ತಂಭನನ್ನು ಗಂಗವಾಡಿಯ ರಾಜ್ಯಪಾಲನಾಗಿ ನೇಮಕ ಮಾಡಿದನು.[೪೩] ಎಂಬುದಾಗಿ ಬಿ.ಷೇಕ್ ಅಲಿರವರ ಸಂಪಾದನದ 'ಕರ್ನಾಟಕ ಚರಿತ್ರೆ' ಸಂಪುಟ-೧ ರಿಂದ ತಿಳಿದುಬರುತ್ತದೆ.

ಇದರಿಂದ ತುಮಕೂರು ಪ್ರದೇಶ ಗಂಗರಾಜ್ಯಕ್ಕೆ ಸೇರಿದ್ದು, ರಾಷ್ಟ್ರಕೂಟರ ದಾಳಿಯಿಂದ ಈ ಪ್ರದೇಶ ಸ್ವಲ್ಪ ಕಾಲ ರಾಷ್ಟ್ರಕೂಟರ ಹಿಡಿತದಲ್ಲಿತ್ತು ಎಂಬುದಾಗಿ ಈ ಚಾರಿತ್ರಿಕ ಕೃತಿಗಳಿಂದ ತಿಳಿದುಬರುತ್ತದೆ. ಇವರ ಆಳ್ವಿಕೆ ಅವಧಿಯಲ್ಲಿ ತುಮಕೂರು ಜಿಲ್ಲೆಯ ವಿವಿಧ ಭಾಗಗಳಲ್ಲಿ ಮೂರು ಶಾಸನ ರಚಿತವಾಗಿದ್ದಿರಬಹುದೆಂದು ಊಹಿಸಬಹುದಾಗಿದೆ.

ಕುಣಿಗಲ್‌ನಲ್ಲಿ ದೊಡ್ಡ ಕೆರೆಯ ಹಿಂಭಾಗಕ್ಕೆ ಹೊಂದಿಕೊಂಡಂತೆ ಸುಮಾರು ೩೦೦ ಮೀಟರ್ ಉದ್ದದ ಪಾಳುಬಿದ್ದ ಕೋಟೆ ಗೋಡೆಯನ್ನು ಕಾಣಬಹುದಾಗಿದೆ. ರಾಷ್ಟ್ರಕೂಟರ ರಾಜ ಒಂದನೇ ಧ್ರುವನ ಮಗ ವೀರ ಕಂಬರಾಯನ ಕಾಲದಲ್ಲಿ ಕೋಟೆಯನ್ನು ಕಟ್ಟಲು ಪ್ರಾರಂಭ ಮಾಡಿರಬೇಕು. ದ್ರುವ ಗಂಗರಸ ಶಿವಮಾರನನ್ನು ಸೋಲಿಸಿ ಸೆರೆಯಲಿಟ್ಟು ಬಹುಶಃ ಈ ವೀರಕಂಬ ರಾಯನನ್ನು ಈ ಭಾಗದ ಆಡಳಿತ ನೋಡಿಕೊಳ್ಳಲು ನೇಮಿಸಿರಬೇಕೆಂದು ಎಂ.ಎಂ.ಕಲಬುರ್ಗಿರವರ ಸಂಪಾದನದ 'ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು' ಎಂಬ ಕೃತಿಯಲ್ಲಿ ಜಯರಾಮಶೆಟ್ಟಿರವರ ಲೇಖನದಿಂದ ತಿಳಿದುಬರುತ್ತದೆ.[೪೪]

ರಾಷ್ಟ್ರಕೂಟರ ಮೇಲೆ ಬೆಳಕು ಚೆಲ್ಲುವ ಮತ್ತೊಂದು ಶಾಸನವೆಂದರೆ ರಾಷ್ಟ್ರಕೂಟರ ಕಾಲದಲ್ಲಿ ಬರೆಯಲ್ಪಟ್ಟ ಹೇಮಾವತಿ ಬಳಿ ದೊರೆತ ಸಿರಾದ ೨೭ ಶಾಸನ. ಇದರ ಕಾಲ ಕ್ರಿ.ಶ.೯೮೨. ಈ ಶಾಸನದ ಪ್ರಕಾರ ತುಮಕೂರು ಪ್ರದೇಶವನ್ನು ಕುರಿತ ಮಾಹಿತಿಗಿಂತಲೂ ಅತ್ಯಂತ ಅಪೂರ್ವವೂ ಆಶ್ಚರ್ಯಕರವೂ ಆದ ಘಟನೆಯ ಬಗ್ಗೆ ಮಾಹಿತಿ ನೀಡುತ್ತದೆ. ಚರಿತ್ರೆಕಾರರಿಗೆಲ್ಲ ಹೊಸ ಬಗೆಯ ಕುತೂಹಲಕ್ಕೆ ಕಾರಣವಾದ ರಾಷ್ಟ್ರಕೂಟರ ಇಂದ್ರರಾಜನ ಮರಣವು ಶ್ರವಣಬೆಳಗೊಳದಲ್ಲಿ ಸಲ್ಲೇಖನ ವ್ರತಾಚರಣೆಯಿಂದ ಆಯಿತೆಂಬ ಬಗ್ಗೆ ಈ ಶಾಸನ ತಿಳಿಸುತ್ತದೆ. ಇಂದ್ರರಾಜನೇ ರಾಷ್ಟ್ರಕೂಟರಲ್ಲಿ ಕೊನೆಯ ಚಕ್ರವರ್ತಿ ಈತನು ನಡೆಸಿದ ದಿಗ್ವಿಜಯಗಳ ವರ್ಣನೆ ಮತ್ತು 'ಇರಿವ ಬೆಡಂಗ', 'ಕೀರ್ತಿನಾರಾಯಣ' ಎಂಬ ಬಿರುದುಗಳು ದೊರೆತ ಬಗ್ಗೆ ಈ ಶಾಸನ ಉಲ್ಲೇಖಿಸುತ್ತದೆ.[೪೫]

ರಾಷ್ಟ್ರಕೂಟರ ಮೂರನೆಯ ಶಾಸನ ದಾಖಲೆಯು ಕ್ರಿ.ಶ.೯೦೩ರಲ್ಲಿ ಬರೆಯಲ್ಪಟ್ಟಿದ್ದು, ಕ್ರಿ.ಶ.೮೮೦ ರಿಂದ ೯೧೪ವರೆಗೆ ಆಳಿದ ಎರಡನೆಯ ಕೃಷ್ಣನ ಆಡಳಿತಕ್ಕೆ ಸಂಬಂಧಿಸಿದೆ. ಇದರ ಪ್ರಕಾರ ಎರಡನೆಯ ಕೃಷ್ಣನ ಕಾಲದಲ್ಲಿ ದಂಡನಾಯಕ ದ್ಯಾವಪ್ಪಯ್ಯನೆಂಬ ಶೂರನು ದಕ್ಷಿಣ ರಾಜ್ಯಗಳ ಸರ್ವಾಧಿಕಾರಿಯಾಗಿ ನೇಮಿಸಲ್ಪಟ್ಟು ಮಣ್ಣೆಯಲ್ಲಿ ತನ್ನ ಕಛೇರಿ ಸ್ಥಾಪಿಸಿಕೊಂಡಿದ್ದ ವಿಚಾರ ತಿಳಿಯುತ್ತದೆ.[೪೬] ಈ ಶಾಸನದ ಆಧಾರದಿಂದ ಗಂಗರಸರು ರಾಷ್ಟ್ರಕೂಟರ ಅಧೀನ ಅಥವಾ ಸಾಮಂತರಾಗಿರುವುದು ಸ್ಪಷ್ಟಪಡುತ್ತದೆ. ಈ ಅಧೀನತ್ವವು ಗಂಗರ ಎರಡನೆಯ ಶಿವಮಾರನಿಂದ ಪ್ರಾರಂಭವಾಯಿತೆಂದು ತಿಳಿಯುತ್ತದೆ. ದುರ್ವಿನೀತ ಅರಸನ ವಿಚಾರವೂ ಈ ಶಾಸನದಲ್ಲಿ ಉಲ್ಲೇಖಿತವಾಗಿದೆ.

ಗಂಗರ ಸದ್ಭಾವನೆ ಪಡೆಯುವ ದೃಷ್ಟಿಯಿಂದ ರಾಷ್ಟ್ರಕೂಟರ ಮೂರನೆಯ ಗೋವಿಂದ ಶಿವಮಾರನನ್ನು ಸೆರೆಯಿಂದ ಬಿಡುಗಡೆ ಮಾಡಿದನು. ಅವಿಧೇಯನಾದ ಸ್ತಂಭನಿಗೆ ಎದುರಾಗಿ ಗಂಗರಸರನ್ನು

ನಿಲ್ಲಿಸಬಹುದು ಎಂಬ ಉದ್ದೇಶವಿತ್ತು ಎಂದು ಬಿ.ಷೇಕ್ ಅಲಿಯವರ 'ಕರ್ನಾಟಕ ಚರಿತ್ರೆ', ಸಂಪುಟ ೨ರಿಂದ ತಿಳಿದುಬರುತ್ತದೆ.[೪೭] ಇದೆ ಅಂಶವನ್ನು ಎಂ.ವಿ.ಕೃಷ್ಣರಾವ್ ಹೇಳುತ್ತಾರೆ. ಆದರೆ ಕೊನೆಗೆ ಯಶಸ್ಸು ಕಾಣದೆ ಗಂಗವಾಡಿಯನ್ನು ಗೆಲ್ಲುವ ತವಕದಲ್ಲಿ ಮುಂದುವರೆದು ನಂತರ ನೊಳಂಬವಾಡಿಯ ಚಾರುಪೊನ್ನೇರವನ್ನು ಆಕ್ರಮಿಸಿದ. ಇವನ ಆಕ್ರಮಣ ನೀತಿಯಿಂದ ವಿಶಾಲ ಸಾಮ್ರಾಜ್ಯ ನಿರ್ಮಾಣವಾಯಿತು. ಇದನ್ನು ಗ್ರಹಿಸಿದ ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರು ಎರಡು ಸಾವಿರ ವರ್ಷಗಳ ಭಾರತೀಯ ಚರಿತ್ರೆಯಲ್ಲಿ ವಿಖ್ಯಾತಿಗೆ ಬಂದ ಹಲವು ಮಂದಿ ರಾಜರಲ್ಲೆ ಮೂರನೆಯ ಗೋವಿಂದನಿಗೆ ಅಗ್ರಸ್ಥಾನ ಲಭಿಸಿರುವುದು ನ್ಯಾಯಯುತವಾಗಿದೆ ಎಂದು ತಿಳಿಸಿದ್ದಾರೆ. ಜಿ.ವಿ.ಕೃಷ್ಣಮೂರ್ತಿಯವರ ಲೇಖನದಲ್ಲಿ ಇದೇ ಅಂಶ ವ್ಯಕ್ತವಾಗಿದೆ.[೪೮]

ಮೂರನೆಯ ಗೋವಿಂದನ ನಂತರ ಅಧಿಕಾರಕ್ಕೆ ಬಂದ ರಾಷ್ಟ್ರಕೂಟರ ಪ್ರಖ್ಯಾತ ದೊರೆ ಅಮೋಘವರ್ಷ ನೃಪತುಂಗ ಇವನಿಗೆ ರಟ್ಟಮರ್ತಾಂಡ, ಅತಿಶಯದವಳ, ವೀರನಾರಾಯಣ, ನೀತಿನಿರಂತಕ, ಅಲ್ಲವಲ್ಲಭ ಎಂಬ ಬಿರುದುಗಳಿವೆ. ಇವನು ರಾಜಮಡು ಎಂಬಲ್ಲಿ ಗಂಗರನ್ನು ಸೋಲಿಸಿದನು. ನಂತರ ಅವರನ್ನು ತನ್ನ ಸಾಮಂತರನ್ನಾಗಿ ಮಾಡಿಕೊಂಡು ವೈವಾಹಿಕ ಸಂಬಂಧ ಬೆಳೆಸಿದನು. ತನ್ನ ಮಗಳು ಚಂದ್ರೋಬಲಬ್ಬೆಯನ್ನು ಗಂಗರ ನೀತಿಮಾರ್ಗ ಎರೆಯಂಗನಿಗೆ ಕೊಟ್ಟು ವಿವಾಹ ಮಾಡಿಸಿದನು. ಇದರಿಂದ ಈ ಎರಡು ರಾಜಮನೆತನಗಳ ನಡುವೆ ಇದ್ದ ದ್ವೇಷಕಡಿಮೆಯಾಗಿ ಸ್ನೇಹ ಬೆಳೆಯಿತು. ಶಾಂತಿ ನೆಲೆಸಿತು ಎಂದು ಟಿ.ಜಿ.ಚಂದ್ರಶೇಖರಪ್ಪ ಹೇಳಿದ್ದಾರೆ.[೪೯]

ತುಮಕೂರು ಪ್ರದೇಶದಲ್ಲಿ ರಾಷ್ಟ್ರಕೂಟರ ಸಾರ್ವಭೌಮತ್ವ ಕುರಿತು ಬಂದಿರುವ ಕೃತಿಗಳು ಅತ್ಯಲ್ಪ. ಗಂಗರ ಮೇಲೆ ಯುದ್ಧ ಹೂಡಿ ಈ ಪ್ರದೇಶವು ಸ್ವಲ್ಪ ಕಾಲ ರಾಷ್ಟ್ರಕೂಟರ ಅಧೀನವಾದ ಬಗ್ಗೆ ತಿಳಿಸಲಾಗಿದೆ. ಕೆ.ಅಭಿಶಂಕರರವರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್', ಸಿ.ಎನ್. ಭಾಸ್ಕರಪ್ಪರವರ ಸಂಪಾದನದ 'ತುಮಕೂರು ಜಿಲ್ಲಾ ದರ್ಶನ', ಡಿ.ಎನ್.ಯೋಗೀಶ್ ರವರ ಸಂಪಾದನದ 'ಜಯಮಂಗಲಿ' ಸ್ಮರಣ ಸಂಚಿಕೆ, ಬಿ.ಎಲ್.ರೈಸ್‌ರವರ 'ಶಾಸನ ಸಂಪುಟ ೧೨', ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರ ಸಂಪಾದನದ 'ಕರ್ನಾಟಕ ಇತಿಹಾಸ ದರ್ಶನ' ಷೇಕ್ ಅಲಿರವರ ಸಂಪಾದನದ 'ಕರ್ನಾಟಕ ಚರಿತ್ರೆ', ಸಂಪುಟ ೨ ಮುಂತಾದ ಕೃತಿಗಳು ರಾಷ್ಟ್ರಕೂಟರ ಇತಿಹಾಸವನ್ನು ತಿಳಿಯಲು ಸಹಾಯಕವಾಗಿವೆ. ಆದರೆ ತುಮಕೂರು ಭಾಗದಲ್ಲಿ ಆಡಳಿತ ನಡೆಸಿದ್ದರ ಬಗ್ಗೆ ಶಾಸನಗಳಲ್ಲಿ ಉಲ್ಲೇಖಿತವಾಗಿರುವುದನ್ನು ಬಿಟ್ಟು ಬೇರೆ ಯಾವುದೇ ಆಧಾರ ಲಭ್ಯವಾಗಿಲ್ಲದಿರುವುದು ಇತಿಹಾಸಕಾರರ ಗ್ರಂಥ ರಚನೆಗೆ ತೊಡಕಾಗಿ ಪರಿಣಮಿಸಿದೆ.

**ಕಲ್ಯಾಣ ಚಾಲುಕ್ಯರು :** ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸಂಬಂಧಿಸಿದ ಹಲವು ಶಾಸನಗಳು ತುಮಕೂರು ಪ್ರದೇಶದ ವಿವಿಧ ಭಾಗಗಳಲ್ಲಿ ದೊರೆತಿವೆ. ಗೆಜೆಟಿಯರ್‌ಗಳು, ಶಾಸನ ಸಂಪುಟಗಳಲ್ಲಿ ಇವರ ಆಳ್ವಿಕೆ

ಬಗ್ಗೆ ತಿಳಿಸಲಾಗಿದೆ. ಕ್ರಿ.ಶ.೧೦೪೦ ರಿಂದ ೧೨೦೦ರ ಅವಧಿಗೆ ಸೇರಿದ ಶಾಸನಗಳಲ್ಲಿರುವ ವಿಷಯ ನೇರವಾಗಿ ಕಲ್ಯಾಣದ ಚಾಲುಕ್ಯ ದೊರೆಗೆ ಸಂಬಂಧಿಸಿದ್ದು ಪ್ರಾರಂಭದ ವಾಕ್ಯಗಳಲ್ಲಿ ಚಾಲುಕ್ಯರ ಪರಮಾಧಿಕಾರ, ಬಿರುದು-ಬಾವಲಿಗಳ ಬಗ್ಗೆ ಹೇಳಲಾಗಿದೆ. ಬಹುತೇಕ ಚಾಲುಕ್ಯ ದೊರೆಗಳಿಗೆಲ್ಲ ಸತ್ಯಾಶ್ರಯ, ಇರಿವ ಬೆಡಂಗ, ಕೀರ್ತಿನಾರಾಯಣ ಎಂಬ ಬಿರುದುಗಳಿದ್ದವು. ಇವು ತುಮಕೂರು ಪ್ರದೇಶದಲ್ಲಿನ ಕೆಲವು ಶಾಸನಗಳಲ್ಲಿ ಸೂಚಿತವಾಗಿದೆ. ಆದರೆ ಅವರ ಕಾಲವನ್ನು ನಿಗಧಿಗೊಳಿಸುವುದು ಸುಲಭ ಸಾಧ್ಯವಲ್ಲ.

ಕಲ್ಯಾಣ ಚಾಲುಕ್ಯರ ಅಧಿಕಾರ ನಾಮಮಾತ್ರದ್ದಾಗಿದ್ದು ಅವರು ತುಮಕೂರು ಪ್ರದೇಶದ ಪಶ್ಚಿಮ ಹಾಗೂ ಉತ್ತರ ಭಾಗಗಳಿಗೆ ನೇಮಿತಗೊಂಡು ಆಳ್ವಿಕೆ ನಡೆಸಿರುವುದು ಚಾಲುಕ್ಯರ ಬಹುತೇಕ ಶಾಸನಗಳಿಂದ ತಿಳಿಯುತ್ತದೆ. ಸಿರಾ, ಪಾವಗಡ, ತಿಪಟೂರು, ಚಿಕ್ಕನಾಯಕನಹಳ್ಳಿ, ಗುಬ್ಬಿ ಭಾಗಗಳಲ್ಲಿ ಅವರ ಶಾಸನಗಳು ದೊರೆತಿವೆ[೫೦] ಎಂಬುದಾಗಿ, ಕೆ.ಅಭಿಶಂಕರ್ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್'ನಲ್ಲಿ ತಿಳಿಸಲಾಗಿದೆ. 'ಜಯಮಂಗಲಿ' ಸ್ಮರಣ ಸಂಚಿಕೆಯಲ್ಲಿ ಜಿ.ಎಂ.ಶ್ರೀನಿವಾಸಯ್ಯನವರು ಬರೆದಿರುವ ಲೇಖನ ಕಲ್ಯಾಣದ ಚಾಲುಕ್ಯರ ಆಳ್ವಿಕೆ ಬಗ್ಗೆ ಪುಷ್ಟಿ ನೀಡಿದೆ. ಸಿ.ಎನ್.ಭಾಸ್ಕರಪ್ಪರವರ 'ತುಮಕೂರು ಜಿಲ್ಲಾ ದರ್ಶನ' ಇದೇ ಅಂಶವನ್ನು ತಿಳಿಸುತ್ತದೆ. ಇವೆಲ್ಲವು ಶಾಸನ ಸಂಪುಟಗಳನ್ನೆ ಅವಲಂಬಿಸಿ ರಚನೆಯಾಗಿವೆ

ತುಮಕೂರು ಪ್ರದೇಶ ಕಲ್ಯಾಣದ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟಿತ್ತು ಎಂಬ ಶಾಸನೋಕ್ತ ಉಲ್ಲೇಖನ ಬಿಟ್ಟರೆ ಉಳಿದ ಯಾವುದೇ ಸ್ಪಷ್ಟ ಮಾಹಿತಿ ಲಭ್ಯವಿಲ್ಲ. ಇವರ ಆಳ್ವಿಕೆ ವಿಚಾರವಾಗಿ ತಿಳಿಸುವಂತಹ ಕೃತಿಗಳು ರಚನೆಯಾಗಿಲ್ಲ. ಇದಕ್ಕೆ ನಿಖರ ಆಧಾರಗಳ ಕೊರತೆ ಇದೆ ಎಂದರೆ ತಪ್ಪಾಗಲಾರದು. ಆದರೂ ಸಂಶೋಧಕರು ಹೆಚ್ಚು ಗಮನ ನೀಡಬೇಕಿದೆ.

**ನೊಳಂಬರು :** ಕರ್ನಾಟಕದ ಇತಿಹಾಸದಲ್ಲಿ ಎಂಟನೆಯ ಶತಮಾನದಿಂದ ಹನ್ನೊಂದನೆಯ ಶತಮಾನದವರೆಗೆ ಆಳಿದ ನೊಳಂಬರ ಕೊಡುಗೆ ಅಪಾರವಾದುದು. ಇವರ ರಾಜಧಾನಿ ಹೆಂಜೇರು ಈಗ ಇದರ ಹೆಸರು ಹೇಮಾವತಿ ಇದು ತುಮಕೂರು ಜಿಲ್ಲೆಗೆ ಹೊಂದಿಕೊಂಡಂತೆ ಅಂಧ್ರಪ್ರದೇಶದ ಮಡಕಶಿರಾ ತಾಲ್ಲೂಕಿನಲ್ಲಿದೆ. ಪ್ರಾಚ್ಯ ಸಂಶೋಧನಾಲಯದ ವರದಿಗಳು, ಬಿಡಿ ಬಿಡಿ ಲೇಖನಗಳು ಇವರ ಇತಿಹಾಸದ ಅಧ್ಯಯನಕ್ಕೆ ಆಕರಗಳಾಗಿವೆ.[೫೧] ಎಂಬುದಾಗಿ, ಎಂ.ವಿ.ವಸು.ಅವರ ಸಂಪಾದಕತ್ವದ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು' ಕೃತಿಯಲ್ಲಿ ರಾಜಪ್ಪ ದಳವಾಯಿ ನೊಳಂಬರು ಎಂಬ ಲೇಖನದಲ್ಲಿ ತಿಳಿಸಿದ್ದಾರೆ. ನೊಳಂಬರ ರಾಜಕೀಯ ಮತ್ತು ಸಾಂಸ್ಕೃತಿಕ ಕೊಡುಗೆಗಳು ವಿಶಿಷ್ಠವಾಗಿರುವುದರಿಂದ ಅವರನ್ನು ಕುರಿತ ಕೃತಿಗಳು ಮತ್ತು ಲೇಖನಗಳಲ್ಲಿ ಅವರ ಆಡಳಿತದ ವಿಷಯವಾಗಿ ಚರ್ಚಿಸಲಾಗಿದೆ.

ನೊಳಂಬರ ರಾಜಕೀಯ ವಿಚಾರವಾಗಿ ರಾಜಪ್ಪ ದಳವಾಯಿ, ಕೆ.ಕೃಷ್ಣಮೂರ್ತಿ, ಎಂ.ಎಸ್.ಕೃಷ್ಣಮೂರ್ತಿ, ಕೆ.ಆರ್.ಬಸವರಾಜುರವರ ಅಧ್ಯಯನಗಳಿಂದ ತಿಳಿಯುತ್ತದೆ. ಸಾಂಸ್ಕೃತಿಕವಾಗಿ

ಕೆ.ಕೃಷ್ಣಮೂರ್ತಿರವರ 'ನೊಳಂಬರ ವಾಸ್ತುಶಿಲ್ಪ ಮತ್ತು ಸಾಂಸ್ಕೃತಿಕ ಒಂದು ಅಧ್ಯಯನ', ಟಿ.ವಿ. ಮಹಾಲಿಂಗಂರವರ 'ನೊಳಂಬ-ಪಲ್ಲವ', ಎಂ.ಎಸ್.ಕೃಷ್ಣಮೂರ್ತಿಯವರ 'ನೊಳಂಬರ ರಾಜಕೀಯ ಮತ್ತು ಸಾಂಸ್ಕೃತಿಕ ಒಂದು ಅಧ್ಯಯನ', ಡಾಗ್ಲಾಸ್ ಬ್ಯಾಕೆಟ್‌ರ 'ಹೇಮಾವತಿಯಲ್ಲಿನ ನೊಳಂಬರ ದೇವಾಲಯಗಳು' ಆ್ಯನ್ ಡ್ರಿವ್ ಎಲ್ ಕೊಹೆನ್‌ರ 'ನೊಳಂಬರ ದೇವಾಲಯ ವಾಸ್ತುಶಿಲ್ಪ' ಕೃತಿಗಳು ಹೆಚ್ಚಿನ ಮಾಹಿತಿ ನೀಡಿವೆ. ಕೆ.ಅಭಿಶಂಕರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್' ಇವರ ಇತಿಹಾಸದ ಮೇಲೆ ಬೆಳಕು ಚೆಲ್ಲಿವೆ. ಇದರಿಂದಾಗಿ ನೊಳಂಬ ಅರಸರ ರಾಜಕೀಯ ಚರಿತ್ರೆ, ರಾಜ್ಯವಿಸ್ತಾರ ಮತ್ತು ಅವರ ಸಾಂಸ್ಕೃತಿಕ ಹಿರಿಮೆ-ಗರಿಮೆ ಹಾಗೂ ಪ್ರಾಚೀನ ರಾಜಮನೆತನಗಳಲ್ಲಿ ಅವರ ಸ್ಥಾನದ ಬಗ್ಗೆ ತಿಳಿದುಬರುತ್ತದೆ.

ದಕ್ಷಿಣ ಭಾರತದಲ್ಲಿ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರು ಸಾರ್ವಭೌಮರಾಗಿದ್ದಾಗ ಈಗಿನ ತುಮಕೂರು ಜಿಲ್ಲಾ ವ್ಯಾಪ್ತಿಯಲ್ಲಿ ಆಳಿದ ಸ್ಥಳೀಯ ರಾಜರುಗಳಲ್ಲಿ ನೊಳಂಬರಾಜರು ಪ್ರಸಿದ್ಧರಾಗಿದ್ದರು. ಇವರನ್ನು ನೊಣಬರೆಂದು ಕರೆಯುತ್ತಿದ್ದರು. ಅವರ ರಾಜ್ಯವು ೩೨೦೦೦ ವರಹಗಳ ನೊಳಂಬವಾಡಿಯೆಂದು ಹೆಸರಾಗಿದ್ದಿತು ಎಂಬುದಾಗಿ ಸಿ.ಎನ್ .ಬಾಸ್ಕರಪ್ಪ ಸಂಪಾದಕತ್ವದ ತುಮಕೂರು ಜಿಲ್ಲಾ ದರ್ಶನದಲ್ಲಿ ತಿಳಿಸಲಾಗಿದೆ. ಪಂಜೇರು ಅಥವಾ ಹೆಂಜೇರು ಅವರ ರಾಜಧಾನಿಯಾಗಿತ್ತು. ಇದು ಈಗಿನ ಆಂಧ್ರಪ್ರದೇಶಕ್ಕೆ ಸೇರಿದ ಅನಂತಪುರ ಜಿಲ್ಲೆಯ ಮಡಕಶಿರಾ ತಾಲ್ಲೂಕಿನ ಹೇಮಾವತಿ ಎಂದು ಲೂಯಿ ರೈಸ್ ನಿರ್ಧಾರಿಸಿದ್ದಾರೆ[೫೨] ಎಂಬ ಅಂಶವನ್ನು ಇದೇ ಕೃತಿ ತಿಳಿಸುತ್ತದೆ.

ನೊಳಂಬ ರಾಜವಂಶದ ಪ್ರಥಮ ದೊರೆ 'ಮಂಗಳ' ಎಂಬುದಾಗಿ ಆರ್.ಎಸ್.ಪಂಚಮುಖಿ, ರಾಜಪ್ಪ ದಳವಾಯಿ, ನೆಲಮಂಗಲ ಲಕ್ಷ್ಮಿನಾರಾಯಣ, ಕೆ.ಆರ್.ಬಸವರಾಜು ಹೇಳಿದ್ದಾರೆ. ನಂತರ ಕ್ರಮವಾಗಿ ಆಡಳಿತದಲ್ಲಿ ಕಂಡುಬರುವ ನೊಳಂಬ ಅರಸರಾದ ಒಂದನೇ ಪೊನ್ನೇರ, ಒಂದನೇ ಪೊಳಲ್ಚೋರ, ನೊಳಂಬಾರಿ ಮಹೇಂದ್ರ, ಒಂದನೇ ಅಯ್ಯಪ್ಪದೇವ, ಬೀರನೊಳಂಬ, ಅಣಿಗ, ಇರಿವನೊಳಂಬ ದಿಲೀಪ, ನನ್ನಿನೊಳಂಬ, ಎರಡನೇ ಪೊಳಲ್ಚೋರ ಎರಡನೇ ಮಹೇಂದ್ರ, ಇರಿವ ನೊಳಂಬ ಘಟೆಯಂಕಕಾರ, ಉದಯಾದಿತ್ಯ, ಇಮ್ಮಡಿ ಜಗದೇಕ ಮಲ್ಲ ಮುಂತಾದವರು ಪ್ರಮುಖ ಅರಸರಾಗಿದ್ದಾರೆ. ನೊಳಂಬ ಅಥವಾ ನೊಳಂಬ ಪಲ್ಲವರ ಮನೆತನವು ಕರ್ನಾಟಕದಲ್ಲಿ ಆಳಿದ ಅನೇಕ ರಾಜಮನೆತನದಲ್ಲಿ ಒಂದು ಕಂಚಿಯ ಪಲ್ಲವರೊಂದಿಗೆ ತಮ್ಮ ಮೂಲವನ್ನು ಕಲ್ಪಿಸಿಕೊಳ್ಳುವ ಇವರು ರಾಜಕೀಯ ಅವಶ್ಯಕತೆಗಳಿಗೆ ಅನುಗುಣವಾಗಿ ರಾಷ್ಟ್ರಕೂಟ, ಗಂಗ, ಕಲ್ಯಾಣ ಚಾಲುಕ್ಯ ಮುಂತಾದ ರಾಜಮನೆತನಗಳೊಂದಿಗೆ ರಾಜಕೀಯ ಮತ್ತು ವೈವಾಹಿಕ ಸಂಬಂಧ ಬೆಳೆಸಿಕೊಂಡರು. ನೊಳಂಬರು ಆರಂಭದಲ್ಲಿ ಸಾಸಿರವೆಂಬ ಸಣ್ಣಪ್ರಾಂತ್ಯದ ಮೇಲೆ ಆಡಳಿತ ನಡೆಸಲಾರಂಭಿಸಿದರು. ಕಾಲಕ್ರಮೇಣ ಕ್ರಿ.ಶ.೯೦೦ ಹೊತ್ತಿಗೆ ಅವರ ರಾಜ್ಯವು ವಿಸ್ತರಿಸಿ ನೊಳಂಬವಾಡಿ ೩೨೦೦೦ ಎಂದಾಯಿತು ಎಂಬುದಾಗಿ ಎಂ.ಎಸ್.ಕೃಷ್ಣಮೂರ್ತಿ ಲೇಖನ ತಿಳಿಸುತ್ತದೆ.

ನೊಳಂಬ ರಾಜರು ನಿಡಗಲ್ಲಿನ ಮೇಲೆ ಪ್ರಬಲ ಅಧಿಕಾರವನ್ನು ಪಡೆದಿದ್ದರು. ಈ ನಿಡಗಲ್ಲು ದುರ್ಗವು ಹೇಮಾವತಿ ಪೂರ್ವಕ್ಕೆ ಸ್ವಲ್ಪ ದೂರದಲ್ಲೇ ಪಾವಗಡ ತಾಲ್ಲೂಕಿನಲ್ಲಿದೆ. ಈಗಿನ ಚಿತ್ರದುರ್ಗ ಜಿಲ್ಲೆಯ ಬಹುಭಾಗಗಳಲ್ಲಿ ವಾಸಮಾಡುತ್ತಿರುವ ನೊಣಬರೆಂಬ ಜನರು ಪುರಾತನ ನೊಳಂಬಕ್ಷತ್ರಿಯ ಪ್ರಜಾ ಜನರ ಮತ್ತು ಅನುಯಾಯಿಗಳ ವಂಶದವರೆಂದು ಹೇಳಲ್ಪಡುತ್ತಾರೆ. ತುಮಕೂರು ಜಿಲ್ಲೆಯಲ್ಲಿರುವ ಶಿರಾ, ಮಧುಗಿರಿ, ಪಾವಗಡ ತಾಲ್ಲೂಕಿನ ಬಹುಭಾಗಗಳು ೩೨೦೦೦ ವರಹದ ನೊಳಂಬವಾಡಿಯಲ್ಲಿ ಸೇರಿದ್ದವು. ಹಿಂದಿನ ದಂತಕಥೆ ಮತ್ತು ಸಂಶಯಾತ್ಮಕವಾದ ಕೆಲವು ಶಾಸನ ದಾಖಲೆಗಳನ್ನು ಬಿಟ್ಟರೆ ನೊಳಂಬ ರಾಜರನ್ನು ಕುರಿತ ದಾಖಲೆಯು ಕ್ರಿ.ಶ.೯೪೩ರಲ್ಲಿ ಬರೆಯಲ್ಪಟ್ಟು ಶಿರಾ ತಾಲ್ಲೂಕಿನಲ್ಲಿ ದೊರೆತಿದೆ. ಈ ಶಾಸನವು ದೊಡ್ಡ ಬಂಡೆಗಲ್ಲಿನ ಮೇಲೆ ಕೆತ್ತಲ್ಪಟ್ಟಿರುವ ಶಿಲಾ ಲೇಖನವಾಗಿದ್ದು, ನೊಳಂಬ ರಾಜರ ವಂಶದ ಹಿರಿಮೆಯನ್ನು ಕುರಿತು ತಿಳಿಸುತ್ತದೆ.[೫೩] ಕೆ.ಅಭಿಶಂಕರವರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್'ನಲ್ಲಿ ಈ ಅಂಶವನ್ನು ಉಲ್ಲೇಖಿಸಿರುವುದನ್ನು ಸಿ.ಎನ್.ಬಾಸ್ಕರಪ್ಪ ಸಂಪಾದನ 'ತುಮಕೂರು ಜಿಲ್ಲಾ ದರ್ಶನ'ದಲ್ಲಿ ಪ್ರಕಟಿಸಲಾಗಿದೆ.

ನೊಳಂಬರ ಕುಲದ ಮಹೇಂದ್ರ ಅಥವಾ ಮಹೇಂದ್ರ ಅಧಿರಾಜನ ಕಾಲದ ಮೂರು ಶಾಸನಗಳು ಈ ಜಿಲ್ಲೆಯಲ್ಲಿ ದೊರೆತಿವೆ ಎಂಬುದಾಗಿ ಡಿ.ಎನ್.ಯೋಗೀಶ್‌ರವರ ಸಂಪಾದನದ 'ಜಯಮಂಗಲಿ' ಸ್ಮರಣಸಂಚಿಕೆಯಲ್ಲಿ ಉಲ್ಲೇಖಿಸಲಾಗಿದೆ. ದೊರೆತಿರುವ ಶಾಸನಗಳಲ್ಲಿ ೨೪ ಮತ್ತು ೩೮ನೇ ಸಂಖ್ಯೆಯ ಶಾಸನಗಳು ಶಿರಾದಲ್ಲಿ ಹಾಗೂ ೪೫ನೇ ಸಂಖ್ಯೆಯ ಶಾಸನವು ಪಾವಗಡದಲ್ಲಿ ದೊರಕಿವೆ. ಮೊದಲ ಎರಡು ಶಾಸನಗಳಲ್ಲಿ ಮಹೇಂದ್ರನ ವಂಶದ ಏಳು-ಬೀಳುಗಳ ಬಗ್ಗೆ ಒಂದೇ ರೀತಿಯ ವಿವರಣೆ ಇದೆ. ಈ ಮಹೇಂದ್ರನು ಚೋಳ ಮತ್ತು ಇತರ ಶತ್ರುಗಳನ್ನು ಸದೆಬಡಿದು ಅವರೆಲ್ಲರ ರಾಜ್ಯವನ್ನು ವಶಪಡಿಸಿಕೊಂಡನೆಂದು ಉಲ್ಲೇಖಿಸಲಾಗಿದೆ. ಸಿರಾ ೩೮ನೇ ಶಾಸನದಲ್ಲಿ ಮಹೇಂದ್ರನು ಬರಗೂರಿನಲ್ಲಿ ಬೀಡುಬಿಟ್ಟಾಗ, ಅಲ್ಲಿನ ಅದಿದೇವತೆ ಮಹಾದೇವನಿಗೆ ತನ್ನ ಅರಮನೆಯನ್ನೇ ದತ್ತಿ ನೀಡಿ ಮಹೇಂದ್ರೇಶ್ವರ ಮೂರ್ತಿ ಪ್ರತಿಷ್ಠಾಪಿಸಿ ಅದರ ಪೂಜೆ ಸೇವಾಕಾರ್ಯಗಳಿಗಾಗಿ ಸಿರಾನಾಡಿನ ನಂದೂರು (ಈಗಿನ ನಾದೂರು) ಪ್ರಾಂತ್ಯವನ್ನು ದೇವಾದಾಯ ಮಾನ್ಯವಾಗಿ ನೀಡಿದ್ದನೆಂದು ತಿಳಿದುಬರುತ್ತದೆ.[೫೪] ಕ್ರಿ.ಶ.೮೭೦ ರಿಂದ ೮೯೭ ಆಡಳಿತ ನಡೆಸಿದ ಮಹೇಂದ್ರ ದಕ್ಷಿಣದಲ್ಲಿ ಧರ್ಮಪುರಿ, ನೈರುತ್ಯದಲ್ಲಿ ಮಂಡ್ಯ ಜಿಲ್ಲೆಯ ತಾಯಲೂರು, ಪೂರ್ವದಲ್ಲಿ ಚಿತ್ತೂರು ಉತ್ತರದಲ್ಲಿ ಬಳ್ಳಾರಿ ಜಿಲ್ಲೆ ಪಶ್ಚಿಮದಲ್ಲಿ ತುಮಕೂರು ಜಿಲ್ಲೆಯನ್ನೊಳಗೊಂಡ ನೊಳಂಬವಾಡಿ ೩೨೦೦೦ ವಿಸ್ತಾರ ರಾಜ್ಯ ಹೊಂದಿದ್ದನು ಎನ್ನುವ[೫೫] ವಿಚಾರವನ್ನು ರಾಜಪ್ಪ ದಳವಾಯಿ 'ದಕ್ಷಿಣ ಕರ್ನಾಟಕದ ಅರಸುಮನೆತನಗಳು ಕೃತಿ'ಯಲ್ಲಿ ಉಲ್ಲೇಖಿಸಿದ್ದಾರೆ. ಇದೇ ಅಂಶವನ್ನು ಆರ್.ಆರ್.ದಿವಾಕರರ ಕೃತಿಯಾದ 'ಕರ್ನಾಟಕ ಇತಿಹಾಸ ಪರಂಪರೆ', ಸಂಪುಟ ೧, ಕೆ.ಆರ್.ಬಸವರಾಜುರವರ 'ನೊಳಂಬ ಇತಿಹಾಸ ದರ್ಶನ', ಕೆ.ಅಭಿಶಂಕರರವರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್' ಮುಂತಾದವು ಒಳಗೊಂಡಿವೆ. ಇದನ್ನು ಗಮನಿಸಿದಾಗ ಮಹೇಂದ್ರ ಆಳ್ವಿಕೆ ಕಾಲದಲ್ಲಿ ತುಮಕೂರು ಪ್ರದೇಶವು ಒಂದು ಪ್ರಮುಖ ಆಡಳಿತ ಕೇಂದ್ರವಾಗಿರುವುದು ತಿಳಿದುಬರುತ್ತದೆ.

ನೊಳಂಬರು ಗಂಗರು, ಚೋಳರು, ಪಲ್ಲವರೊಂದಿಗೆ ವೈವಾಹಿಕ ಸಂಬಂಧವನ್ನು ಹೊಂದಿ ಪ್ರಾಬಲ್ಯ ಹೊಂದಿದ್ದರು. ಇವರು ತಮ್ಮನ್ನು ನೊಳಂಬ ಪಲ್ಲವರು ಎಂದು ಹೇಳಿಕೊಂಡಿರುವುದರಲ್ಲಿ ಇದು ವ್ಯಕ್ತವಾಗುತ್ತದೆ. ಇದನ್ನು ರಾಜಪ್ಪ ದಳವಾಯಿಯವರ ಲೇಖನದಲ್ಲಿ ಉಲ್ಲೇಖಿಸಲಾಗಿದೆ.[೫೬] ನೊಳಂಬರು ಉನ್ನತ ಕಾಲದಲ್ಲಿ ೩೨೦೦೦ ಪ್ರಾಂತ್ಯವನ್ನು ಆಡಳಿತ ಮಾಡುತ್ತಿದ್ದರು. ಇದರಲ್ಲಿ ಕೋಲಾರ, ಚಿತ್ರದುರ್ಗ, ಬೆಂಗಳೂರು, ಬಳ್ಳಾರಿ, ತುಮಕೂರು, ಅನಂತಪುರ ಜಿಲ್ಲೆಗಳು ಸೇರಿಕೊಂಡಿದ್ದು ಬೃಹತ್ ರಾಜ್ಯವಾಗಿತ್ತು. ಇದಕ್ಕೆ ನೊಳಂಬವಾಡಿ ಎಂಬುದಾಗಿ ಹೆಸರು ಇತ್ತು ಎಂದು ಮಹಾಬಲೇಶ್ವರಪ್ಪ ನವರು ಹೇಳಿದ್ದಾರೆ. ಇದು ಕೆ.ಅಭಿಶಂಕರವರ ಸಂಪಾದನದ ತುಮಕೂರು ಜಿಲ್ಲಾ ಗೆಜೆಟಿಯರ್‌ನಲ್ಲಿ ನೊಳಂಬವಾಡಿ ಎಂದು ಉಲ್ಲೇಖಿಸಲ್ಪಟ್ಟಿದೆ. ನೊಳಂಬರು ಮೊದಲಿಗೆ ಗಂಗರ ಮತ್ತು ಬಾದಾಮಿ ಚಾಲುಕ್ಯರ ಸಾಮಂತರಾಗಿ ಇತಿಹಾಸದಲ್ಲಿ ಕಂಡುಬರುತ್ತಾರೆ ಎಂದು ನೆಲಮಂಗಲ ಲಕ್ಷ್ಮಿನಾರಾಯಣ, ಆರ್.ಎಸ್. ಪಂಚಮುಖಿ, ಎಚ್.ಜಯಮ್ಮ ಕರಿಯಣ್ಣನವರ ಲೇಖನಗಳಿಂದ ತಿಳಿದುಬರುತ್ತದೆ.[೫೭]

ಮಹೇಂದ್ರನ ನಂತರ ಅವನ ಮಗ ನನ್ನಿಗ ಅಧಿಕಾರಕ್ಕೆ ಬಂದ ವಿಷಯ ಶಾಸನಗಳಿಂದ ತಿಳಿದುಬರುತ್ತದೆ. ಕ್ರಿ.ಶ.೮೯೭ರಲ್ಲಿ ಬರೆಯಲ್ಪಟ್ಟ ಮಿಡಿಗೇಶಿ ೫೨ನೇ ಶಾಸನದಲ್ಲಿ ಕಂಡುಬರುವ ಪ್ರಕಾರ ಈ ನನ್ನಿಗನು ನೊಳಂಬಾಧಿರಾಜ ನೊಲಿಪಯ್ಯನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಶಿರಾದ ೩೯ನೇ ಮತ್ತೊಂದು ಶಾಸನದಲ್ಲಿ ಇವನ ಹೆಸರು "ನನ್ನಿಗಾಶ್ರಯ" ಎಂದು ಉಲ್ಲೇಖಿಸಲ್ಪಟ್ಟಿದೆ. ಈ ನನ್ನಿಗಾಶ್ರಯನು ಕ್ರಿ.ಶ.೯೨೦ರಲ್ಲಿ ಬರಗೂರಿನ ಮಹೇಶ್ವರ ದೇವಾಲಯಕ್ಕೆ ಮಾನ್ಯಕೊಟ್ಟಂತೆ ಶಾಸನದಲ್ಲಿ ಬರೆಯಲ್ಪಟ್ಟಿದೆ. ಮಿಡಿಗೇಶಿ ೭೧ನೇ ಶಾಸನದಲ್ಲಿ ಈತನನ್ನು ನೊಳಂಬಾದಿರಾಜ ನನ್ನಿಗನೆಂದು ಕರೆಯಲಾಗಿದೆ. ಈ ಶಾಸನವು ನನ್ನಿಗನಿಗೂ ಮತ್ತು ಗಂಗರಿಗೂ ಘೋರ ಕದನವಾಯಿತೆಂದು ತಿಳಿಸುತ್ತದೆ.[೫೮]

ಅನಂತರ ದೊರೆತ ಲೇಖನಗಳಿಂದ ನನ್ನಿಗ ನೊಳಂಬನ ಮಗನಾದ "ಅಣ್ಣಿಗ" ಅಥವಾ ಬೀರ ನೊಳಂಬನ ವಿಚಾರವಾಗಿ ತಿಳಿದು ಬರುತ್ತದೆ. ಇವು ಒಟ್ಟುಗೂಡಿ ದೊರೆತ ಮೂರು ಲೇಖನಗಳಲ್ಲಿ ಮೂರನೆಯದಾದ ಮಿಡಿಗೇಶಿ ೨೭ರ ಲೇಖನವು ಈತನನ್ನು ಅಂಕಯ್ಯನೆಂದೆ ಹೆಸರಿಸುತ್ತದೆ. ಇವನು ಬಿದಿರೂರು ಬಳಿ ಖುತುನಾಗನ ಕೈಕೆಳಗೆ ಗಂಗಸೈನ್ಯದ ವಿರುದ್ಧ ಯುದ್ಧಮಾಡಿದ ವರ್ಣನೆ ಇದೆ. ಕ್ರಿ.ಶ.೯೮೦ ರಲ್ಲಿ ರಚಿತವಾಗಿರಬಹುದಾದ ಶಿರಾ ೨೬ ಮತ್ತು ೨೯ನೇ ಶಾಸನಗಳಲ್ಲಿ ಆಹವಮಲ್ಲನೊಳಂಬನ ಪ್ರಸ್ತಾಪವಿದೆ. ಆಹವಮಲ್ಲ ಎಂಬ ಬಿರುದು ಚಾಲುಕ್ಯರ ಸಾರ್ವಭೌಮತ್ವದ ಗುರುತಾಗಿದ್ದು ಆಗಲೇ ಸಮರ್ಥರಾದ ರಾಜರು ಆಹವಮಲ್ಲನೆಂಬ ಚಾಲುಕ್ಯರ ಹೆಸರು ಇಟ್ಟುಕೊಳ್ಳುವುದು ಪದ್ಧತಿಯಾಗಿತ್ತು. ಇದೇ ಕಾಲದಲ್ಲಿ ನೊಳಂಬರು ತುಂಬ ಕಷ್ಟದ ದಿವಸಗಳನ್ನು ಕಾಣಬೇಕಾಯಿತು ಎಂಬ ಉಲ್ಲೇಖನವನ್ನು 'ಜಯಮಂಗಲಿ' ಸ್ಮರಣ ಸಂಚಿಕೆಯಲ್ಲಿ ಜಿ.ಎಂ.ಶ್ರೀನಿವಾಸಯ್ಯನವರು ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ. ರಾಷ್ಟ್ರಕೂಟರು ಪ್ರಬಲರಾಗಿರುವವರೆಗೂ ನೊಳಂಬರು ಅವರ ರಕ್ಷಣೆಯಲ್ಲಿ ಸುರಕ್ಷಿತವಾಗಿದ್ದರು. ಆದರೆ

ಚಾಲುಕ್ಯರ ಮತ್ತು ಗಂಗರ ಶಕ್ತಿವಿಸ್ತರಣಾ ನೀತಿಗಳಿಂದಾಗಿ ನೊಳಂಬರು ಇವರಿಬ್ಬರ ನಡುವೆ ಸಿಕ್ಕಿ ನರಳಬೇಕಾಯಿತು. ಕ್ರಿ.ಶ.೯೭೪ರಲ್ಲಿ ಗಂಗದೊರೆ ಮಾರಸಿಂಹನು ನೊಳಂಬರ ಮೇಲೆ ಮುಗಿಬಿದ್ದು ಅವರ ವಂಶವನ್ನು ನಾಶಗೊಳಿಸಿ "ನೊಳಂಬ ಕುಲಾಂತಕ" ಎಂಬ ಬಿರುದು ಧರಿಸಿದ ವಿಚಾರವನ್ನು ಕೆ.ಅಭಿಶಂಕರರವರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್'ನಲ್ಲಿ ತಿಳಿಸಲಾಗಿದೆ.[೫೯] ಇದನ್ನು ಸಿ.ಎನ್.ಭಾಸ್ಕರಪ್ಪನವರ ಸಂಪಾದಕತ್ವದ 'ತುಮಕೂರು ಜಿಲ್ಲಾ ದರ್ಶನ' ಮತ್ತು ಡಿ.ಎನ್.ಯೋಗೀಶ್‌ರವರ 'ಜಯಮಂಗಲಿ' ಸ್ಮರಣ ಸಂಚಿಕೆ ಒಳಗೊಂಡಿದೆ. ಒಟ್ಟಾರೆ ಗಂಗರ ಸಾಮ್ರಾಜ್ಯ ವಿಸ್ತರಣಾ ನೀತಿಗೆ ಸಿಲುಕಿದ ನೊಳಂಬ ರಾಜ್ಯ ತುಮಕೂರು ಪ್ರದೇಶದಲ್ಲಿ ಕ್ಷೀಣಿಸಿತು ಎಂಬ ಅಭಿಪ್ರಾಯಕ್ಕೆ ಬರಲಾಗಿದೆ.

ತುಮಕೂರು ಪ್ರದೇಶದಲ್ಲಿ ನೊಳಂಬರ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಗೆ ಸಂಬಂಧಪಟ್ಟಂತೆ ದೊರೆತಿರುವ ಆಕರಗಳು ಅಲ್ಪವೆ. ಇವರ ಇತಿಹಾಸಕ್ಕೆ ಸಂಬಂಧಿಸಿದಂತೆ ಬಿ.ಎಲ್.ರೈಸ್‌ರವರ ಶಾಸನ ಸಂಪುಟ-೧೨ರಲ್ಲಿ ಮತ್ತು ಎಂ.ಶೇಷಾದ್ರಿಯವರ ಶಾಸನ ಸಂಪುಟ xiii-೧೯೭೫ಗಳಲ್ಲಿ ದಾಖಲಿಸಿದರು. ಕೆ.ಅಭಿಶಂಕರವರು 'ತುಮಕೂರು ಜಿಲ್ಲಾ ಗೆಜೆಟಿಯರ್'ನಲ್ಲಿ ನೊಳಂಬರ ಇತಿಹಾಸವನ್ನು ಪ್ರಕಟಿಸಿದರು. ೧೯೩೨ ರಿಂದ ೧೯೩೫ರಲ್ಲಿ ಪುರಾತತ್ವ ಇಲಾಖಾ ಸಮಿತಿ ಶೋಧನೆ ಮಾಡಿದ ಸಾಂಸ್ಕೃತಿಕ ಶೋಧಗಳು ನೊಳಂಬರ ಆಡಳಿತ ಮತ್ತು ಅವರ ಸಾಂಸ್ಕೃತಿಕ ಚಟುವಟಿಕೆಗಳ ಮೇಲೆ ಬೆಳಕು ಚೆಲ್ಲುತ್ತವೆ. ನಂತರ ಬಂದ ನೆಲಮಂಗಲ ಲಕ್ಷ್ಮಿನಾರಾಯಣರ ಕೃತಿ 'ದಕ್ಷಿಣ ಭಾರತದ ಅರಸುಮನೆತನಗಳು', ಎಂ.ವಿ.ವಸುರವರ 'ದಕ್ಷಿಣ ಕರ್ನಾಟಕದ ಅರಸುಮನೆತನಗಳು', ಕೆ.ಆರ್.ಬಸವರಾಜುರವರ 'ನೊಳಂಬ ಇತಿಹಾಸ ದರ್ಶನ' ಮುಂತಾದವು ನೊಳಂಬರ ಚರಿತ್ರೆಯ ಅಧ್ಯಯನಕ್ಕೆ ನೆರವಾಗಿದೆ.

**ನೊಳಂಬರ ಅರ್ವಾಚೀನ ಇತಿಹಾಸ :** ಕರ್ನಾಟಕದ ಇತಿಹಾಸದಲ್ಲಿ ಹನ್ನೊಂದನೇ ಶತಮಾನದ ಮಧ್ಯದ ವೇಳೆಗೆ ನೊಳಂಬರ ಇತಿಹಾಸದ ಒಂದು ಘಟ್ಟ ಮುಕ್ತಾಯವಾದ ಮೇಲೆ ಮತ್ತೆ ೧೩ನೇ ಶತಮಾನದಿಂದ ನೊಳಂಬರ ಇತಿಹಾಸದ ದ್ವಿತೀಯ ಘಟ್ಟ ಪ್ರಾರಂಭವಾಗಿರುವುದನ್ನು ಕಾಣಬಹುದು. ನೊಳಂಬರು ವಿಶೇಷವಾಗಿ ಮಧುಗಿರಿ ಮತ್ತು ಸುತ್ತಮುತ್ತಲ ಪ್ರಾಂತ್ಯಗಳನ್ನು ಆಳಿದ ಮಹಾನಾಡ ಪ್ರಭುಗಳಾಗಿದ್ದರು. ಇವರು ಮಧುಗಿರಿ ಕೋಟೆಯನ್ನು ಕಟ್ಟಿದ್ದಲ್ಲದೆ ವಿಜಯನಗರ ಅರಸರಿಂದ ಸನ್ನದನ್ನು ಪಡೆದಿದ್ದರು ಎಂದು ಉಲ್ಲೇಖಿಸಲಾಗಿದೆ.[೬೦] ಈ ಮಹಾನಾಡ ಪ್ರಭುಗಳ ಇತಿಹಾಸ ಕುರಿತ ಕೃತಿಗಳು ಮತ್ತು ಲೇಖನಗಳ ಬಗ್ಗೆ ಮುಂದೆ ಚರ್ಚಿಸಲಾಗಿದೆ.

**ನಿಡಗಲ್ಲು ಚೋಳರು :** ಎಂಟರಿಂದ ಹನ್ನೆರಡನೆಯ ಶತಮಾನದ ಕಾಲವಧಿಯಲ್ಲಿ ಚೋಳರು ಹೇಮಾವತಿ ಮತ್ತು ನಿಡಗಲ್ಲಿನ ನಡುವಣ ಪ್ರದೇಶಕ್ಕೆ ಒಡೆಯರಾಗಿದ್ದರು.[೬೧] ಕರ್ನಾಟಕದ ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಯ ಬಹುಭಾಗ ಇವರ ಅಧಿಪತ್ಯದಲ್ಲಿತ್ತು. ಇವರು ಕಲ್ಯಾಣ ಚಾಲುಕ್ಯರ ಮತ್ತು ಹೊಯ್ಸಳರ ಶತೃಗಳಾಗಿದ್ದರು. ಈ ಮನೆತನದ ಪ್ರಮುಖ ದೊರೆಗಳೆಂದರೆ ಇರುಂಗೋಳ, ಮಲ್ಲಿದೇವ, ಬಮ್ಮ ದೇವ. ಈ ಮನೆತನದ ಮೊದಲ ದೊರೆ ಜಟಾ ಹಾಗೂ ಕೊನೆಯ ದೊರೆ ಬೈರರಸ ಎಂಬುದಾಗಿ

'ದಕ್ಷಿಣ ಕರ್ನಾಟಕ ಅರಸು ಮನೆತನಗಳು' ಕೃತಿಯಲ್ಲಿ ಕೆ.ಬಿ.ಶಿವತಾರಕ್‌ರವರ 'ನಿಡಗಲ್ಲು ಚೋಳರು' ಲೇಖನದಲ್ಲಿ ತಿಳಿಸಲಾಗಿದೆ. ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರ 'ಕರ್ನಾಟಕ ಇತಿಹಾಸ ದರ್ಶನ', ಬಿ.ಎಲ್.ರೈಸ್‌ರ 'ಶಾಸನ ಸಂಪುಟ ೧೨', ಚಿತ್ತಯ್ಯನವರ 'ನಿಡಗಲ್ಲು ಪಾಳೇಗಾರರು ಮತ್ತು ನಿಡಗಲ್ಲು ಚೋಳರು' ಮಹಾಪ್ರಬಂಧ ಇವುಗಳು ಹೆಚ್ಚಿನ ಮಾಹಿತಿ ಒದಗಿಸಿವೆ. ಸೀರ್ಯ (ಈಗೀನ ಸಿರಾ) ತಾಲ್ಲೂಕಿನ ಬಡಗಣ ಗಡಿಯಲ್ಲಿರುವ ಈಗ ಹೇಮಾವತಿ ಎಂದು ಹೆಸರಾಗಿರುವ ಪಂಜೇರು ಇಲ್ಲವೇ ಹೆಂಜೇರು ಅವರ ರಾಜಧಾನಿಯಾಗಿತ್ತು.[೬೨] ತುಮಕೂರು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಅವರ ಶಾಸನಗಳಿವೆ. ತುಮಕೂರು ಜಿಲ್ಲೆಯ ಕೆಲವಾರು ಶಾಸನಗಳಲ್ಲಿ ಚೋಳದನಂಜಯ ಎರಿಗನು ಅಳವಾಡಿ ೬೦೦ ನಾಡಿಗೆ ಅರಸನೆಂದು ಅವನು ಗಂಗರ ಸಾಮಂತನೆಂದು ಹೇಳಿದೆ.[೬೩] ಕೆ.ಎ.ನೀಲಕಂಠಶಾಸ್ತ್ರೀರವರು ಅನಂತಪುರ, ಕಡಪ ಜಿಲ್ಲೆಯ ಶಾಸನಗಳನ್ನು ಸಂಪಾದಿಸುತ್ತಾ ರೇನಾಡು ಮತ್ತು ತುಮಕೂರು ಪ್ರದೇಶದಲ್ಲಿ ಆಳುವ ಚೋಳರು ಎರಿಗಲ್ ಸೂಚಿಸುವುದರಿಂದ ಅವರ ಮೂಲಸ್ಥಾನ ಎರಿಗಲ್ವಾಡಿ, ಎರಿಗಲ್ ಎಂಬುದಾಗಿ ಬಿ.ಎಲ್.ರೈಸ್‌ರ ಎಫಿಗ್ರಾಫಿಯಾ ಕರ್ನಾಟಕ ಸಂಪುಟ.೧೨ ರಿಂದ ತಿಳಿಯುತ್ತದೆ. ಈ ಎರಿಗಲ್ ಎಂಬುದು ಈಗಿನ ಪಾವಗಡ ತಾಲ್ಲೂಕಿನ ನಿಡಗಲ್ಲು ಎಂದು ಕಂಡುಬರುತ್ತದೆ. ಚೋಳರ ಮೊದಲಿನ ರಾಜಧಾನಿ ಗೋವಿಂದವಾಡಿ ನಂತರ ಹೇಮಾವತಿ ಕೊನೆಯಲ್ಲಿ ಮಾತ್ರ ನಿಡಗಲ್ಲು ಇವರ ರಾಜಧಾನಿಯಾಗಿತ್ತು ಎಂಬ ಅಂಶ ಎಂ.ವಿ.ವಸುರವರ ಸಂಪಾದನದ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು ಕೃತಿ'ಯಲ್ಲಿ ಕೆ.ಬಿ.ಶಿವತಾರಕ್‌ರ ಲೇಖನದಿಂದ ತಿಳಿಯುತ್ತದೆ.

ಆರ್.ನರಸಿಂಹಚಾರ್ಯರು ಮೈಸೂರು ಪುರಾತತ್ವ ವಾರ್ಷಿಕ ವರದಿಗಳಲ್ಲಿ ನಿಡಗಲ್ಲು ಇತಿಹಾಸ ಬಗೆಗೆ ಲೇಖನಗಳನ್ನು ಪ್ರಕಟಿಸಿದ್ದಾರೆ. ಅವರು ಶಾಸನಗಳು, ದೇವಾಲಯಗಳು, ಮೂರ್ತಿಶಿಲ್ಪಗಳು ಮುಂತಾದವುಗಳ ಅಧ್ಯಯನ ನಡೆಸಿ ಇಡೀ ನಿಡಗಲ್ಲುದುರ್ಗದ ನಕ್ಷೆ ರಚಿಸಿದ್ದಾರೆ. ಅವರ 'ಶಾಸನ ಪದ್ಯಮಂಜರಿ' ಶಾಸನಗಳಲ್ಲಿ ಬರುವ ಸಾಹಿತ್ಯಾಂಶಗಳ ವರ್ಣನೆಯನ್ನು ಹೊಂದಿದೆ. 'ಜಯಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟಗೊಂಡಿರುವ ಉಮಾಪತಿಯವರ "ನಿಡಗಲ್ಲು ಕೈಫಿಯತ್ತು" ಲೇಖನದಲ್ಲಿ ಸ್ಥಳಪುರಾಣ, ಐತಿಹ್ಯ, ಸ್ಥಳಿಯರ ಹೇಳಿಕೆ ಮತ್ತು ಶಾಸನಗಳ ಹಿನ್ನಲೆಯಲ್ಲಿ ನಿಡಗಲ್ಲಿನ ಚರಿತ್ರೆಯನ್ನು ಚರ್ಚಿಸಿದ್ದಾರೆ.[೬೪]

ತುಮಕೂರು ಪ್ರದೇಶದಲ್ಲಿ ನಿಡಗಲ್ಲು ಚೋಳರ ಆಳ್ವಿಕೆ ಸಂಬಂಧಪಟ್ಟ ಆರಂಭಿಕ ದೊರೆಗಳ ಬಗ್ಗೆ ತಿಳಿಸುವ ಶಾಸನಗಳು ಕಂಡುಬಂದಿಲ್ಲ. ಆದರೆ ಕ್ರಿ.ಶ.೧೧೧೭ ರಿಂದ ೧೧೪೩ ಅವಧಿಯಲ್ಲಿ ಆಳ್ವಿಕೆ ನಡೆಸಿದ ಇರುಂಗೋಳನ ಕಾಲದ ಎಂಟು ಶಾಸನಗಳು ದೊರೆತಿದ್ದು, ಇವು ತುಮಕೂರು ಜಿಲ್ಲೆಯ ಸಿರಾ ತಾಲ್ಲೂಕು ಅನಂತಪುರ ಜಿಲ್ಲೆಯ ಕಲ್ಯಾಣದುರ್ಗ, ಮಡಕಶಿರಾ, ಗೂಟಿ, ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನಲ್ಲಿವೆ. ಚೋಳ ಮನೆತನದ ವಂಶಾವಳಿಯಲ್ಲಿ ಜಟಾ ಮೊದಲಿಗ ಎಂಬ ಉಲ್ಲೇಖ ಮೂರನೇ ಇರುಂಗೋಳನ ನಿಡಗಲ್ಲು ಶಾಸನದಲ್ಲಿರುವುದನ್ನು ಬಿ.ಎಲ್.ರೈಸ್ ಸಂಪಾದಿಸಿದ್ದಾರೆ. ಜಟಾ, ಬ್ರಹ್ಮದೇವ,

ಮಂಗರಸ, ಬೀಚಿ, ಗೋವಿಂದರಸರ ಕಾಲದಲ್ಲಿ ಗೋವಿಂದವಾಡಿ ರಾಜಧಾನಿಯಾಗಿತ್ತು. ಕ್ರಿ.ಶ.೧೧೪೩ ರಿಂದ ೧೧೯೬ರವರೆಗೆ ಆಳಿದ ಮಲ್ಲಿದೇವ ಹೆಂಜೇರುವಿಗೆ ರಾಜಧಾನಿ ಬದಲಾಯಿಸಿದ ಕ್ರಿ.ಶ.೧೨೧೯-೧೨೩೨ರವರೆಗೆ ಆಳಿದ ಇಮ್ಮಡಿ ಬಮ್ಮದೇವನ ಕಾಲದಲ್ಲಿ ನಿಡಗಲ್ಲು ರಾಜಧಾನಿಯಾಗಿತ್ತು.[೬೫] ಇದರಿಂದ ವಿದ್ವಾಂಸರುಗಳಲ್ಲಿ 'ನಿಡಗಲ್ಲು ಚೋಳರು' ಎಂಬ ಉಲ್ಲೇಖನ ಚರ್ಚೆಗೆ ಗ್ರಾಸವಾಗಿದೆ.

ಹೊಯ್ಸಳರಿಗೂ ಮತ್ತು ನಿಡಗಲ್ಲು ಚೋಳರಿಗೂ ಹಲವು ಯುದ್ಧಗಳು ಜರುಗಿ ಕ್ರಿ.ಶ.೧೨೮೫ರಲ್ಲಿ ನಿಡಗಲ್ಲು ಕೋಟೆ ಹೊಯ್ಸಳರಸ ಇಮ್ಮಡಿ ನರಸಿಂಹನ ವಶವಾಯಿತು ಎಂಬುದಾಗಿ ಎಂ.ವಿ.ಕೃಷ್ಣರಾವ್ ತಿಳಿಸಿದ್ದಾರೆ.[೬೬]

## ೨.೨. ಮಧ್ಯಕಾಲೀನ ಚರಿತ್ರೆ ಕೃತಿಗಳ ಅವಲೋಕನ

ಚರಿತ್ರೆ ಅಧ್ಯಯನದ ಎರಡನೇ ಭಾಗವಾಗಿ ಮಧ್ಯಕಾಲೀನ ಚರಿತ್ರೆ ಕಂಡುಬಂದಿದ್ದು, ಪ್ರಾಚೀನ ಚರಿತ್ರೆಗಿಂತ ಭಿನ್ನವಾಗಿದೆ. ಈ ಅವಧಿಯಲ್ಲಿ ವಿಶಾಲ ಸಾಮ್ರಾಜ್ಯ, ಸಂಸ್ಕೃತಿಗಳು ಹೆಚ್ಚಾಗಿ ಬೆಳವಣಿಗೆಯಾದ್ದರಿಂದ ಮಧ್ಯಕಾಲೀನ ಚರಿತ್ರೆಯಾಗಿ ವಿಂಗಡಿಸಲ್ಪಟ್ಟಿದೆ. ಈ ಮಧ್ಯಕಾಲೀನ ಚರಿತ್ರೆಯಲ್ಲಿ ಕಂಡುಬರುವ ಪ್ರಮುಖ ರಾಜವಂಶಗಳು ಎಂದರೆ ಹೊಯ್ಸಳರು, ವಿಜಯನಗರ ಸಾಮ್ರಾಜ್ಯ, ಬಿಜಾಪುರದ ಸುಲ್ತಾನರು, ಮೊಗಲರು, ಮರಾಠರು, ಪಾಳೆಯಗಾರರು ಹಾಗೂ ಮೈಸೂರು ಒಡೆಯರು. ಇವರ ಆಡಳಿತದ ಬೆಳವಣಿಗೆ ಮತ್ತು ಪ್ರಾಮುಖ್ಯತೆಯನ್ನು ಕುರಿತು ಬಂದಿರುವ ಕೃತಿಗಳು, ಲೇಖನಗಳನ್ನು ಅವಲೋಕಿಸುವುದರ ಮೂಲಕ ವಿಮರ್ಶಾತ್ಮಕವಾಗಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಮಧ್ಯಕಾಲೀನ ಚರಿತ್ರೆಯಲ್ಲಿ ಪ್ರಮುಖವಾಗಿ ಹೊಯ್ಸಳರು, ವಿಜಯನಗರದ ಅರಸರು, ಬಿಜಾಪುರದ ಸುಲ್ತಾನರು, ಮೊಗಲರು, ಮರಾಠರು, ಪಾಳೆಯಗಾರರು, ಹಾಗೂ ಮೈಸೂರು ಒಡೆಯರುಗಳ ಸ್ಥಾಪನೆ ಹಾಗೂ ಬೆಳವಣಿಗೆ ಕುರಿತಾಗಿ ಅಧ್ಯಯನ ಮಾಡಲಾಗಿದೆ. ಇವುಗಳ ಅಧ್ಯಯನಕ್ಕೆ ಬಿ.ಎಲ್. ರೈಸ್‌ರವರ 'ಶಾಸನ ಸಂಪುಟ ೧೨', ಬಿ.ಷೇಕ್ ಅಲಿಯವರ 'ಕರ್ನಾಟಕ ಚರಿತ್ರೆ ಸಂಪುಟಗಳು', ಬಾ.ರಾ.ಗೋಪಾಲರವರ 'ಕರ್ನಾಟಕದ ಇತಿಹಾಸ', ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರ 'ಕರ್ನಾಟಕ ಇತಿಹಾಸ ದರ್ಶನ', ಎಂ.ವಿ.ವಸುರವರ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು', ಮುಂತಾದವು ನೆರವಾಗಿವೆ.

**ಹೊಯ್ಸಳರು :** ಹೊಯ್ಸಳರ ಚರಿತ್ರೆ ಅಧ್ಯಯನಕ್ಕೆ ಅಂದಿನ ಸಮಕಾಲೀನ ಚಾರಿತ್ರಿಕ ಕೃತಿಗಳು ಹೆಚ್ಚು ನೆರವಾಗಿವೆ. ನಾಗಚಂದ್ರನ 'ಮಲ್ಲಿನಾಥ ಪುರಾಣ, 'ಪಂಪರಾಮಾಯಣ', ರಾಜಾದಿತ್ಯನ ಕ್ಷೇತ್ರಗಣಿತ, ವ್ಯವಹಾರಗಣಿತ, 'ಲೀಲಾವತಿ', ನೇಮಿಚಂದ್ರನ 'ನೇಮಿನಾಥ ಪುರಾಣ', ಹರಿಹರನ ಗಿರಿಜಾಕಲ್ಯಾಣ, ರಾಘವಾಂಕ ಕವಿಯ 'ಹರಿಶ್ಚಂದ್ರ ಕಾವ್ಯ', 'ಸಿದ್ಧರಾಮ ಪುರಾಣ', 'ವೀರೇಶ ಚರಿತ್ರೆ', ಸೋಮನಾಥ ಚರಿತ್ರೆ ಮುಂತಾದವು ಹೊಯ್ಸಳರ ಆಡಳಿತದ ವಿಚಾರವನ್ನು ತಳಿಯಲು ಸಹಾಯಕವಾಗಿವೆ.[೬೭]

ಹೊಯ್ಸಳರ ಚರಿತ್ರೆ ಕುರಿತು ಬಿ.ಎಲ್ .ರೈಸ್ ಮತ್ತು ಎಂ.ಶೇಷಾದ್ರಿರವರ ಶಾಸನ ಸಂಪುಟಗಳು, ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್', ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರ ಸಂಪಾದನ 'ಕರ್ನಾಟಕ ಇತಿಹಾಸ ದರ್ಶನ' ಸಿ.ನಾಗಭೂಷಣರವರ 'ಗುಬ್ಬಿ-ಒಂದು ಸಾಂಸ್ಕೃತಿಕ ಅಧ್ಯಯನ', ಕೆ.ನಾರಾಯಣಚಾರ್‌ರವರ 'ಮಧುಗಿರಿ ಚರಿತ್ರೆ', ಎ.ಎಸ್.ನಂಜುಂಡ ಸ್ವಾಮಿಯವರ 'ಹೊಯ್ಸಳರ ಇತಿಹಾಸ', ಕೆ.ಮೋಹನ್‌ಕೃಷ್ಣ ರೈಯವರ 'ಪ್ರಭುತ್ವ ಮತ್ತು ಜನತೆ' ಮೊದಲಾದವು ಅಧ್ಯಯನ ಮಾಡಲು ನೆರವಾಗಿವೆ. ತುಮಕೂರು ಪ್ರದೇಶದಲ್ಲಿ ದೊರೆತಿರುವ ಶಾಸನಗಳಲ್ಲಿ ಹೆಚ್ಚು ಶಾಸನಗಳು ಹೊಯ್ಸಳರ ಕಾಲಕ್ಕೆ ಸಂಬಂಧಿಸಿವೆ. ಹೊಯ್ಸಳರ ಪ್ರಸಿದ್ಧ ದೊರೆ ವಿಷ್ಣುವರ್ಧನ ಚೋಳರು ಮತ್ತು ನೊಳಂಬರನ್ನು ಸೋಲಿಸಿ ಅವರ ಸಮಸ್ತ ನಾಡನ್ನು ತನ್ನ ವಶಕ್ಕೆ ತೆಗೆದುಕೊಂಡಿದ್ದನು. ಹೀಗಾಗಿ ಸಂಪೂರ್ಣ ತುಮಕೂರು ಪ್ರದೇಶ ಹೊಯ್ಸಳರ ಅಧೀನಕ್ಕೆ ಒಳಪಟ್ಟಿತು.[೬೮]

ಹೊಯ್ಸಳರ ಮೊದಲ ರಾಜನಾಗಿ ಆಳಿದ ನೃಪಕಾಮನ ವಿಷಯವನ್ನು ಕುರಿತಾದ ಬರವಣಿಗೆಗಳು ಈ ಪ್ರದೇಶದಲ್ಲಿ ದೊರೆತಿಲ್ಲ. ವಿನಯಾದಿತ್ಯನಿಗೆ ಸಂಬಂಧಿಸಿದ ಕೆಲವು ಮತ್ತು ವಿಷ್ಣುವರ್ಧನನ (ಬಿಟ್ಟಿದೇವ) ಆಳ್ವಿಕೆಗೆ ಸಂಬಂಧಿಸಿದಂತೆ ದೊರೆತಿರುವ ಪ್ರಾರಂಭಿಕ ಕಾಲದ ಕೆಲವು ಬರವಣಿಗೆಗಳು ತಿಪಟೂರು ತಾಲ್ಲೂಕಿನಲ್ಲಿ ದೊರೆತಿವೆ. ಕ್ರಿ.ಶ.೧೧೩೦ರಲ್ಲಿ ಬರೆಯಲ್ಪಟ್ಟ ತಿಪಟೂರಿನ ೧೦೪ನೇ ಶಾಸನ ಕ್ರಿ.ಶ.೧೧೩೪ರಲ್ಲಿ ಬರೆಯಲ್ಪಟ್ಟ ಗುಬ್ಬಿಯ ೩೪ನೇ ಶಾಸನ ವಿಷ್ಣುವರ್ಧನನ ಕಾಲಕ್ಕೆ ಸಂಬಂಧಿಸಿದ್ದು, ಇಡಗೂರಿನ ಸುತ್ತಮುತ್ತಲ ಪ್ರದೇಶವನ್ನು ಆಳಿದ ಪಾಳೆಯಗಾರ ಅಧಿಪತಿಗಳ ವಿಷಯ ತಿಳಿಸುತ್ತವೆ.

ಮಧ್ಯಕಾಲೀನ ಚರಿತ್ರೆ ಪ್ರಾರಂಭದ ಸಮಯಕ್ಕೆ ದ್ವಾರಸಮುದ್ರದ ಹೊಯ್ಸಳ ರಾಜಕೀಯ ಚರಿತ್ರೆ ಪ್ರಾಮುಖ್ಯತೆ ಪಡೆದುಕೊಂಡು ಪ್ರಖ್ಯಾತ ರಾಜವಂಶ ಎನಿಸಿಕೊಂಡಿತು. ಹೊಯ್ಸಳರ ರಾಜಧಾನಿ 'ಶಶಾಕ ಪುರ' ಇಲ್ಲವೆ 'ಸೊಸೆಯೂರು' ನಂತರ 'ದ್ವಾರಸಮುದ್ರ' 'ಹಳೇಬಿಡು'ಗಳಾಗಿ ಬದಲಾಗಿದೆ. ಈ ವಂಶದ ಸ್ಥಾಪಕ 'ಸಳ', ಎಂಬುದಾಗಿ ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರು 'ಕರ್ನಾಟಕ ಇತಿಹಾಸ ದರ್ಶನ', ಕೃತಿಯಲ್ಲಿ ತಿಳಿಸಿದ್ದಾರೆ. ಇವರು ಮೊದಲಿಗೆ ಗಂಗವಾಡಿ ಪ್ರದೇಶದಲ್ಲಿ ಆಡಳಿತ ಮಾಡುತ್ತಿದ್ದ ರಾಷ್ಟ್ರಕೂಟರ ಸಾಮಂತರಾಗಿದ್ದರು.[೬೯] ಕ್ರಿ.ಶ.೧೧೩೪ರಲ್ಲಿ ಬರೆಯಲ್ಪಟ್ಟ ಗುಬ್ಬಿ ೩೪ನೇಯ ಶಾಸನದ ಪ್ರಕಾರ ವಿಷ್ಣವರ್ಧನ ಮಹಾಪ್ರಭುವು ಗಂಗಾವಾಡಿ ೯೬೦೦೦, ನೊಳಂಬವಾಡಿ ೩೨೦೦೦ಗಳೆರಡನ್ನು ಸ್ವಾಧೀನಪಡಿಸಿಕೊಂಡನು.[೭೦] ವಿಷ್ಣುವರ್ಧನ ಹೊಯ್ಸಳರ ಕೀರ್ತಿಯನ್ನು ಎಲ್ಲಡೆ ಹರಡಿದ ಪರಾಕ್ರಮಶಾಲಿ ಎಂಬುದಾಗಿ ಎಂ.ವಿ.ಕೃಷ್ಣರಾವ್ ತಿಳಿಸಿದ್ದಾರೆ.[೭೧] ಹೊಯ್ಸಳರ ಕೃಷಿವ್ಯವಸ್ಥೆ, ಉತ್ಪಾದನಾ ವ್ಯವಸ್ಥೆ, ಸಮಾಜದ ರಚನೆ, ನಗರವ್ಯವಸ್ಥೆ, ಧಾರ್ಮಿಕ ಪ್ರಭುತ್ವ ಮುಂತಾದ ವಿಚಾರಗಳನ್ನು ತಿಳಿಯಲು ಕೆ.ಮೋಹನ್‌ಕೃಷ್ಣ ರೈರವರ ಸಂಪಾದನದ 'ಪ್ರಭುತ್ವ ಮತ್ತು ಜನತೆ' ಕೃತಿ ಹೆಚ್ಚು ನೆರವಾಗಿದೆ.

ಮಹಾಸಾಮಂತ ಮರುಗೆರೆ ನಾಡಿನ 'ಗೂಳಿ ಬಾಚಿದೇವ' ಮರುಗೆರೆ ನಾಡಿನಲ್ಲಿ ಹೊಯ್ಸಳ ನಾಡಿನ ಚಕ್ರವರ್ತಿ ವೀರಗಂಗ ವಿಷ್ಣುವರ್ಧನ ನರಸಿಂಗದೇವನ ಅಂದರೆ ಒಂದನೇ ನರಸಿಂಹನ

ಮಹಾಸಾಮಂತನಾಗಿ ಆಳ್ವಿಕೆ ಮಾಡುತ್ತಿದ್ದನು. ಈ ನಾಡು ಪ್ರಸ್ತುತ ತುಮಕೂರು ತಾಲ್ಲೂಕು, ಕುಣಿಗಲ್ ತಾಲ್ಲೂಕು ಉತ್ತರ ಭಾಗಗಳು, ಗುಬ್ಬಿ ತಾಲ್ಲೂಕು ಪೂರ್ವದ ಕೆಲವು ಭಾಗಗಳನ್ನು ಒಳಗೊಂಡಿತ್ತು ಎಂಬುದಾಗಿ ಡಿ.ಎನ್.ಯೋಗೀಶ್ವರಪ್ಪನವರ 'ಮರುಗೆರೆ ನಾಡಿನ ಹೊಯ್ಸಳ ವಿಷ್ಣುವರ್ಧನ "ಸಾಮಂತ ಗೂಳಿ ಬಾಚಿದೇವ" ಎನ್ನುವ ಲೇಖನ ತಿಳಿಸುತ್ತದೆ.[೨೨] ಕೆ.ನಾರಾಯಣಚಾರ್ ರವರ 'ಮಧುಗಿರಿ ಚರಿತ್ರೆ', ಕೃತಿಯಲ್ಲಿ ಗೂಳಿ ಬಾಚಿದೇವ ಮರುಗೆರೆ ನಾಡಿನಲ್ಲಿ ನಿರ್ಮಿಸಿದ ದೇವಾಲಯಗಳ ಬಗ್ಗೆ ಉಲ್ಲೇಖಿಸಿದ್ದಾರೆ. ಗೂಳಿ ಬಾಚಿದೇವ ನಾಲ್ಕು ಧರ್ಮಗಳನ್ನು ಪಾಲಿಸುವ ಸಂಪ್ರದಾಯವುಳ್ಳವನು. ಬೌದ್ಧ, ಜೈನ, ಶೈವ ಮತ್ತು ವೈಷ್ಣವ ಧರ್ಮಗಳನ್ನು ಪಾಲಿಸುತ್ತಿದ್ದನು. ಈತನು ಕೈದಾಳದಲ್ಲಿ ಗಂಗೇಶ್ವರ, ನಾರಾಯಣ ಸ್ವಾಮಿ ದೇವಾಲಯಗಳನ್ನು ನಿರ್ಮಿಸಿದ, ಭೀಮ ಸಮುದ್ರ ಮತ್ತು ಅಡಾಳ ಸಮುದ್ರ ದೊಡ್ಡ ಕೆರೆಗಳನ್ನು ನಿರ್ಮಿಸಿದ ವಿಚಾರವನ್ನು ತುಮಕೂರು ಬಳಿ ದೊರೆತ ೯ನೆಯ ಶಾಸನ ತಿಳಿಸುತ್ತದೆ.[೨೩]

ಸೆಟ್ಟಿಕೆರೆಯ ಗೋಪಾಲ ದಣ್ಣಾಯಕ ಹೊಯ್ಸಳ ಅರಸ ಮೂರನೆಯ ನರಸಿಂಹನ ಕಾಲದಲ್ಲಿ ಶ್ರೀಮನ್ಮಹಾ ಪ್ರಧಾನ ಹುದ್ದೆ ಹೊಂದಿ ಆಡಳಿತ ನಡೆಸಿದ ಬಗ್ಗೆ ಡಿ.ಎನ್.ಯೋಗೀಶ್ವರಪ್ಪ ತಿಳಿಸಿದ್ದಾರೆ. ಹೊಯ್ಸಳ ದೇಶವೆಂದೇ ಖ್ಯಾತಿಗೊಂಡಿದ್ದ ತುಮಕೂರು ಜಿಲ್ಲೆಯ ಪಶ್ಚಿಮ ಭಾಗದಲ್ಲಿ ತನ್ನದೇ ಆದ ಸುಗುಣಗಳಿಂದ ಹೊಯ್ಸಳರ ಸಾಮಾಜಿಕ, ಆರ್ಥಿಕ ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆದುಕೊಂಡಿರುವನೆಂದರೆ 'ಶ್ರೀಮನ್ಮಹಾಪ್ರಧಾನ ಗೋಪಾಲದಣ್ಣಾಯಕ', ಎಂಬುದಾಗಿ ಉಲ್ಲೇಖಿಸಲಾಗಿದೆ. ಮೂರನೆಯ ನರಸಿಂಹನು ಅಸಂಧಿ ನಾಡಿನ ಹುಳಿಯಾರಿಗೆ ಸೇರಿದ್ಧ ಸೆಟ್ಟಿಕೆರೆ ಮತ್ತು ಹೊಸಕೆರೆ ಹಾಗೂ ಅವುಗಳಿಗೆ ಸೇರಿದ್ದ ಹಳ್ಳಿಗಳಿಂದ ಬರುವ ಆದಾಯವನ್ನು ಮಹಾಪ್ರಧಾನ ಗೋಪಾಲದಣ್ಣಾಯಕನಿಗೆ ದಾನಪೂರ್ವಕವಾಗಿ ನೀಡಿದ್ದ ಎಂಬುದಾಗಿ ತಿಳಿಸಲಾಗಿದೆ.[೨೪] ಕ್ರಿ.ಶ.೧೨೮೧ರ ಚಿಕ್ಕನಾಯಕನಹಳ್ಳಿ ಶಾಸನದಲ್ಲಿ ಅಸಂದಿನಾಡಿನ ಸೆಟ್ಟಿಕೆರೆ ಮತ್ತು ಸಣ್ಣ ಹಳ್ಳಿಗಳು 'ಶ್ರೀಭರಿತ ಪ್ರಕಾಶಪುರ' ಎಂಬ ಅಗ್ರಹಾರವಾಗಿ ಬೆಳೆದ ವಿಷಯವಿದೆ. ಈ ಅಗ್ರಹಾರವನ್ನು ನಿರ್ಮಿಸಿದವನು ಮೂರನೆಯ ನರಸಿಂಹನ ಮಂತ್ರಿ ಗೋಪಾಲದಣ್ಣಾಯಕ.

ವಿಷ್ಣುವರ್ಧನ, ಎರಡನೆಯ ಬಲ್ಲಾಳ, ಇಮ್ಮಡಿ ನರಸಿಂಹ ಮುಂತಾದ ಪ್ರಮುಖ ಅರಸರನ್ನು ಹೊಯ್ಸಳ ಸಾಮ್ರಾಜ್ಯ ಹೊಂದಿತ್ತು. ಈ ಅವಧಿಯಲ್ಲಿ ಉತ್ತರ ಭಾರತದಲ್ಲಿ ಅಲ್ಲಾವುದ್ದೀನ್ ಖಿಲ್ಜಿ ಪ್ರಬಲವಾಗಿ ಅವನ ದಂಡನಾಯಕ ಮಲ್ಲಿಕಾಫರ್‌ನ ದಾಳಿಗಳು ದ್ವಾರಸಮುದ್ರದವರೆಗೂ ವ್ಯಾಪಿಸಿದವು. ಸ್ಥಳೀಯವಾಗಿ ಚೋಳರ ಪ್ರಬಲತೆ ಕ್ಷೀಣಿಸಿತ್ತು. ಕ್ರಿ.ಶ.೧೧ನೇ ಶತಮಾನವು ಚರಿತ್ರೆಯ ಪ್ರಭುತ್ವ ಕಾಲ. ಗಂಗರು, ಚಾಲುಕ್ಯರು, ನೊಳಂಬರು, ಪಾಂಡ್ಯರು ಹೀಗೆ ಹಲವಾರು ರಾಜಮನೆತನಗಳು ರಾಜಕೀಯ ಹಕ್ಕು ಬಾಧ್ಯತೆಗಳಿಗಾಗಿ ಸೆಣಸಾಡಿದವು. ಅಂತಹ ಸಮಯದಲ್ಲಿ ತುಮಕೂರು ಪ್ರದೇಶದವರೆಗೂ ವ್ಯಾಪಿಸಿದ ಹೊಯ್ಸಳ ಆಡಳಿತ ಚರಿತ್ರೆ ಮಹತ್ವಕಾರಿಯಾಗಿದೆ. ಈ ಭಾಗದಲ್ಲಿ ಅವರು ನೀಡಿದ ಪ್ರೋತ್ಸಾಹದಿಂದ ಹಲವಾರು ದೇವಾಲಯಗಳು ನಿರ್ಮಾಣಗೊಂಡು ಸಾಂಸ್ಕೃತಿಕ ಕ್ಷೇತ್ರ ವಿಸ್ತರಣೆಗೊಂಡಿತು.

ರಾಮನಾಥ, ಮುಮ್ಮಡಿ ಬಲ್ಲಾಳರ ಕಾಲದಲ್ಲಿ ಮಹಮದಿಯರು ಹೊಯ್ಸಳ ರಾಜ್ಯದ ಮೇಲೆ ಆಕ್ರಮಣ ನಡೆಸಿದರು. ಕೊನೆಯ ದೊರೆ ವಿರೂಪಾಕ್ಷನ ಅಸಮರ್ಥತೆಯಿಂದ ಹೊಯ್ಸಳ ರಾಜ್ಯವು ವಿಜಯನಗರ ಸಾಮ್ರಾಜ್ಯದಲ್ಲಿ ವಿಲೀನವಾಯಿತು. ಅದರ ಭಾಗವಾದ ತುಮಕೂರು ಪ್ರದೇಶ ವಿಜಯನಗರ ಅರಸರ ಆಡಳಿತಕ್ಕೆ ಒಳಪಟ್ಟಿತು.

**ವಿಜಯನಗರ :** ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಮತ್ತು ಅದರ ಉನ್ನತಿ ಕುರಿತಾದ ವಿವರಣೆ ಒಳಗೊಂಡಿರುವ ಅಂದಿನ ಸಮಕಾಲೀನ ಹಲವು ಕೃತಿಗಳು ರಚನೆಗೊಂಡಿವೆ. ಸಂಸ್ಕೃತ ಭಾಷೆಯಲ್ಲಿ ರಚನೆಗೊಂಡ ಸಾಯಣರ 'ವೇದಾರ್ಥ ಪ್ರಕಾಶ', ನರಹರಿಯ 'ಸ್ಮೃತಿ ಕೌಸ್ತುಭ', ಭಾರತೀ ತೀರ್ಥರ 'ವೈಯಾಸಿಕ ನ್ಯಾಯಮಾಲ', ರೇವಣಭಟ್ಟನ 'ಸ್ಮೃತಿ ಚಂದ್ರಿಕೆ', ವೀರಣ್ಣಾರಾಧ್ಯನ 'ಪಂಚರತ್ನ', ಸೋಮನಾಥನ 'ಸೋಮನಾಥ ಭಾಷ್ಯ', ಶ್ರೀಪತಿ ಪಂಡಿತನ 'ಶ್ರೀಕರಭಾಷ್ಯ', ದಿವಾಕರನ 'ಭಾರತಾಮೃತ', 'ರಸಮಂಜರಿ', ಜಯತೀರ್ಥ 'ಪ್ರಮಾಣ ಪದ್ಧತಿ', ವಿದ್ಯಾರಣ್ಯರ 'ಕಾಲಮಾದವ', ರಾಜನಾಥ ದಿಂಡಿಮನ 'ಅಚ್ಚುತ ರಾಯಾಭ್ಯದಯ', ಗಂಗಾದೇವಿಯ 'ಮದುರಾ ವಿಜಯಂ' ಮುಂತಾದವು ಚಾರಿತ್ರಿಕ ಮಾಹಿತಿ ನೀಡುತ್ತವೆ. ಅದೇ ರೀತಿ ಕನ್ನಡ ಭಾಷೆಯಲ್ಲಿ ರಚನೆಗೊಂಡ ಭೀಮಕವಿಯ 'ಬಸವಪುರಾಣ', ಲಕ್ಕಣ್ಣ ದಂಡನಾಥನ 'ಶಿವತತ್ವ ಚಿಂತಾಮಣಿ', ಚಾಮರಸನ 'ಪ್ರಭುಲಿಂಗಲೀಲೆ', ಕಲ್ಲರಸನ 'ಮಲ್ಲಿಕಾರ್ಜುನ ವಿಜಯ', ರತ್ನಾಕರವರ್ಣಿಯ 'ಭರತೇಶವೈಭವ', ತಿಮ್ಮಕವಿಯ 'ಭಾರತ', ಬಾಹುಬಲಿಯ 'ನಾಗಕುಮಾರನ ಕಥೆ', ನಾರಾಯಣಪ್ಪನ 'ಗದುಗಿನ ಭಾರತ', ಲಕ್ಷ್ಮೀಶನ 'ಜೈಮಿನಿಭಾರತ', ನಂಜುಂಡ ಕವಿಯ 'ರಾಮನಾಥ ಚರಿತೆ', ಕನಕದಾಸರ 'ಮೋಹನ ತರಂಗಿಣಿ', ಲಿಂಗಣ್ಣ ಕವಿಯ 'ಕೆಳದಿನೃಪವಿಜಯ' ಮುಂತಾದವು ಚಾರಿತ್ರಿಕ ವಿವರಣೆ ಹೊಂದಿವೆ ಎಂಬುದಾಗಿ ಸಿ.ಮಹದೇವ ಮತ್ತು ಚಿನ್ನಸ್ವಾಮಿ ಸೋಸಲೆರವರ ಸಂಪಾದಕತ್ವದ 'ಹಂಪಿ, ಅಂದು-ಇಂದು' ಕೃತಿಯಲ್ಲಿನ ಕೆ.ಮೋಹನ್‌ಕೃಷ್ಣ ರೈರವರ ಲೇಖನದಿಂದ ತಿಳಿಯುತ್ತದೆ.[೨೫]

ತೆಲುಗು ಭಾಷೆಯಲ್ಲಿ ರಚನೆಗೊಂಡ ಶ್ರೀನಾಥಕವಿಯ 'ಕಾಶಿಕಂಡ', ಮಲ್ಲಯ ಮತ್ತು ಸಿಂಗಯ ಬರೆದ 'ವರಾಹ ಪುರಾಣ', ಕೃಷ್ಣದೇವರಾಯನ 'ಅಮುಕ್ತ ಮೌಲ್ಯದ; ಪೆದ್ದಣನ 'ಮನುಚರಿತಮು', ದುರ್ಜಟಿಯ 'ಕೃಷ್ಣರಾಜ ವಿಜಯ ', ತಿಮ್ಮನ 'ಪಾರಿಜಾತಾಪಹರಣಮು', ಮೊದಲಾದವು ಚಾರಿತ್ರಿಕ ವಿವರಣೆ ನೀಡಿವೆ ಎಂಬುದಾಗಿ ಸೂರ್ಯನಾಥಕಾಮತ್ ರವರ ಸಂಪಾದನ 'ವಿಜಯನಗರ ಸಾಮ್ರಾಜ್ಯ' ಕೃತಿಯಲ್ಲಿ ಉಲ್ಲೇಖಿಸಲಾಗಿದೆ.

೧೯೦೧ರಲ್ಲಿ ರಾಬರ್ಟ್‌ಸಿವೆಲ್‌ರ 'ಎ ಫರ್‌ಗಾಟನ್ ಎಂಪಯರ್', ಮೊದಲ ಕೃತಿ ರಚನೆಯಾಗುವವರೆಗೆ ವಿಜಯನಗರದ ಬಗ್ಗೆ ಪರಿಜ್ಞಾನವಿರಲಿಲ್ಲ ನಂತರ ಬಿ.ಸೂರ್ಯನಾರಾಯಣರಾವ್ ರವರು 'ಎ ನೆವರ್ ಟು ಬಿ ಫರ್‌ಗಾಟನ್' ಎಂಬ ಕೃತಿ ರಚಿಸಿದರು. ಬಿ.ಎ.ಸಾಲತೊರೆ 'ಸೋಸಿಯಲ್ ಅಂಡ್ ಪೊಲಿಟಿಕಲ್ ಕಂಡಿಶನ್ಸ್ ಇನ್ ವಿಜಯನಗರ ಎಂಪಯರ್', ಪಾದರ್ ಹೆರಾಸ್‌ರವರ

‘ಅರವೀಡು ಡೆನೆಸ್ಟಿ’ ಮುಂತಾದವು ವಿಜಯನಗರ ಸಾಮ್ರಾಜ್ಯದ ಇತಿಹಾಸದ ಮೇಲೆ ಹೆಚ್ಚಿನ ಬೆಳಕು ಚೆಲ್ಲಿವೆ.[೨೧]

ಭೂಸನೂರ ಮಠರವರ ಸಂಪಾದನದ ‘ವಿಜಯಕಲ್ಯಾಣ’, ಜಿ.ಎಸ್ .ದೀಕ್ಷಿತ್ ಮತ್ತು ವಿಶ್ವೇಶ್ವರರವರ ಸಂಪಾದನದ ‘ಸಂಗಮರ ಕಾಲದ ವಿಜಯನಗರ’, ಪಾಂಡುರಂಗರಾಯರ ‘ವಿಜಯನಗರ ಸಾಮ್ರಾಜ್ಯ’, ಬಿ.ಎ.ವಿವೇಕ ರೈರವರ ‘ಪ್ರವಾಸಿ ಕಂಡ ವಿಜಯನಗರ’, ಮಲೇಪುರಂ ಜಿ.ವೆಂಕಟೇಶರವರ ‘ಪ್ರೌಢದೇವರಾಯ ವಿಜಯಕಲ್ಯಾಣ; ಸೂರ್ಯನಾಥ ಕಾಮತ್‌ರವರ ‘ಕನ್ನಡ ರಮಾರಮಣ ಕೃಷ್ಣದೇವರಾಯ’, ಬಾ.ರಾ.ಗೋಪಾಲರವರ ‘ಕರ್ನಾಟಕ ಇತಿಹಾಸ’, ಸಿ.ಮಹದೇವ ಮತ್ತು ಚಿನ್ನಸ್ವಾಮಿ ಸೋಸಲೆರವರ ಸಂಪಾದನದ ‘ಹಂಪಿ ಅಂದು-ಇಂದು’ ಮುಂತಾದ ನೂರಾರು ಕೃತಿಗಳು ವಿಜಯನಗರ ಸಾಮ್ರಾಜ್ಯದ ಸ್ವರೂಪವನ್ನು ತಿಳಿಸುವಲ್ಲಿ ಸಹಾಯಕವಾಗಿದೆ.

ಕ್ರಿ.ಶ.೧೯ನೆಯ ಶತಮಾನದಲ್ಲಿ ಚರಿತ್ರೆ ಬರವಣಿಗೆ ಹೊಸ ಆಯಾಮವನ್ನು ಪಡೆದುಕೊಂಡಿತು. ಬ್ರಿಟಿಷರು ತಮ್ಮ ಸಾಮ್ರಾಜ್ಯಶಾಹಿ ಧೋರಣೆಯ ಅನುಷ್ಠಾನಕ್ಕೆ ಹಾಗೂ ಅದರ ಸ್ಥಾಪನೆಗೆ ಚರಿತ್ರೆಯನ್ನು ಬಳಸಿಕೊಂಡರೆ, ರಾಷ್ಟ್ರೀಯವಾದಿಗಳು ಬ್ರಿಟಿಷ್ ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡಲು ಹಾಗೂ ರಾಷ್ಟ್ರೀಯ ಪ್ರಜ್ಞೆಯನ್ನು ಮೂಡಿಸಲು ಚರಿತ್ರೆಯ ಘಟನೆಗಳನ್ನು ಆಯ್ಕೆ ಮಾಡಿಕೊಂಡರು. ಅದೇ ರೀತಿ ವಿಜಯನಗರ ಚರಿತ್ರೆಯು ಬ್ರಿಟಿಷರ ‘ವಿಭಜಿಸಿ ಆಳುವ ನೀತಿ’ಗೆ ಹಾಗೂ ಕೋಮುವಾದಿ ಬೆಳವಣಿಗೆಗೆ ಬಳಕೆಯಾಯಿತು. ರಾಷ್ಟ್ರೀಯವಾದಿಗಳ ಸುವರ್ಣಯುಗದ ಪ್ರತಿಪಾದನೆಗೆ ಹಾಗೂ ರಾಷ್ಟ್ರೀಯ ಪ್ರಜ್ಞೆಯನ್ನು ಮುಸ್ಲಿಂ ವಿರೋಧಿ ನೆಲೆಯಿಂದ ಮೂಡಿಸುವ ಪ್ರಯತ್ನಕ್ಕೆ ನೇರವಾಗಿ ಬಳಕೆಯಾಯಿತು. ವಿಜಯನಗರ ಚರಿತ್ರೆ ಈ ಕಾರಣಗಳಿಂದಾಗಿ ಬ್ರಿಟಿಷ್ ಆಳ್ವಿಕೆಯುದ್ದಕ್ಕೂ ಹಾಗೂ ಸ್ವಾತಂತ್ರ್ಯೋತ್ತರ ಅವಧಿಯಲ್ಲೂ ಹೆಚ್ಚಿನ ಚರ್ಚೆಗೆ ಒಳಗಾಯಿತು ಎಂಬುದಾಗಿ ಕೆ.ಮೋಹನ್‌ಕೃಷ್ಣ ರೈರವರ ‘ವಿಜಯನಗರ: ದೇಶಿ ಮತ್ತು ವಿದೇಶಿ ಸಂಕಥನ’ ಎಂಬ ಲೇಖನದಿಂದ ತಿಳಿಯುತ್ತದೆ.[೨೨]

ವಿಜಯನಗರ ಚರಿತ್ರೆ ಚರಿತ್ರೆಕಾರರನ್ನು ಹೆಚ್ಚಿನ ಅಧ್ಯಯನಕ್ಕೆ ತೊಡಗುವಂತೆ ಮಾಡಿದೆ. ಬಿ.ಎಲ್. ರೈಸ್ ರವರ ಶಾಸನ ಸಂಪುಟಗಳು, ಗೆಜೆಟಿಯರ್‌ಗಳು ಅಧ್ಯಯನಕ್ಕೆ ನೆರವಾಗಿವೆ. ಉತ್ತರ ಭಾರತದ ದೆಹಲಿ ಸುಲ್ತಾನರ ದಕ್ಷಿಣದ ದಾಳಿಗಳನ್ನು ತಡೆದು ಹಿಂದೂ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ವಿಫಲತೆ ಕಂಡ ಹೊಯ್ಸಳರು, ಅವರ ಉತ್ತರಾಧಿಕಾರಿಗಳೆಂಬಂತೆ ಹಕ್ಕ(ಹರಿಹರ) ಬುಕ್ಕ ಸಹೋದರರು ಆ ಹೊಣೆ ಹೊತ್ತರು ಎಂದು ಎಂ.ವಿ. ಕೃಷ್ಣರಾವ್ ಮತ್ತು ಎಂ.ಕೇಶಭಟ್ಟರವರು ‘ಕರ್ನಾಟಕ ಇತಿಹಾಸ ದರ್ಶನ’, ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.[೨೩] ತಿಪಟೂರು, ಚಿಕ್ಕನಾಯಕನಹಳ್ಳಿ, ಕುಣಿಗಲ್ ಮತ್ತು ತುಮಕೂರಿನಲ್ಲಿ ದೊರೆತಿರುವ ಶಾಸನಗಳು ಹರಿಹರ ಮತ್ತು ಬುಕ್ಕರಾಯರ ಆಳ್ವಿಕೆ ಬಗ್ಗೆ ತಿಳಿಸುತ್ತವೆ. ಮಹಾಮಾಂಡಲೇಶ್ವರ ವೀರಬುಕ್ಕಣ್ಣ ಚೇಳೂರು ನಾಡಿನ ಸೀಬೂರು ಗ್ರಾಮದ ಬಳಿಯಲ್ಲಿ ‘ಹರಿಹರ

ರಾಯಪುರ' ಎಂಬ ಹಳ್ಳಿಯನ್ನು, ಅಲ್ಲಿ ಕೆರೆಯೊಂದನ್ನು ನಿರ್ಮಿಸಿದ ವಿಚಾರ ಶಾಸನಗಳಲ್ಲಿ ವ್ಯಕ್ತವಾಗಿದೆ.[೭೯] ಶಾಸನಗಳು ವಿಜಯನಗರ ಅರಸರು ತುಮಕೂರು ಪ್ರದೇಶದಲ್ಲಿ ದಾನ-ದತ್ತಿ ನೀಡಿದ, ಹೊಸ ಹಳ್ಳಿ-ಕೆರೆ-ಕುಂಟೆಗಳನ್ನು ನಿರ್ಮಿಸಿದ ವಿಚಾರವಾಗಿ ತಿಳಿಸುತ್ತವೆ. ಪಾಳೆಯಗಾರರನ್ನು ಕುರಿತ ಕೃತಿಗಳು ವಿಜಯನಗರ ಅರಸರು ಈ ಭಾಗದಲ್ಲಿ ಹೊಂದಿದ್ದ ಸಂಬಂಧ ತಿಳಿಸುತ್ತವೆ.

ತುಳುವ ವಂಶದ ನರಸನಾಯಕ ಮತ್ತು ಕೃಷ್ಣದೇವರಾಯನ ಕಾಲದಲ್ಲಿ ರಾಜ್ಯವು ಹೆಚ್ಚು ವಿಸ್ತಾರ ಹಾಗೂ ಸಮೃದ್ಧಿಯನ್ನು ಕಂಡಿತು. ಅದಕ್ಕೆ ತಕ್ಕಂತೆ ಕೃಷ್ಣದೇವರಾಯ 'ಮಹಾರಾಜಾಧಿರಾಜ', 'ರಾಜಪರಮೇಶ್ವರ' ವೀರಪ್ರತಾಪ, ಮಹಾರಾಯ ಮೊದಲಾದ ಬಿರುದು ಧರಿಸಿದ್ದನು ಎಂದು ಎಂ.ವಿ.ಕೃಷ್ಣರಾವ್ ತಿಳಿಸಿದ್ದಾರೆ.[೮೦] ಕೃಷ್ಣದೇವರಾಯನ ಕಾಲದ ಹಲವು ಶಾಸನಗಳು ತುಮಕೂರು ಪ್ರದೇಶದಲ್ಲಿ ದೊರತಿವೆ. ೧೫ ಮತ್ತು ೧೬ನೆಯ ಶತಮಾನಗಳಲ್ಲಿ ವಿಜಯನಗರ ಅರಸರು ತಮ್ಮ ಆಶ್ರಯದಲ್ಲಿದ್ದ ಅಧಿಕಾರಿಗಳಿಗೆ, ಸಾಮಂತ ಪಾಳೆಯಗಾರರಿಗೆ ಭೂಪ್ರದೇಶಗಳನ್ನು, ಗ್ರಾಮಗಳನ್ನು ಉಂಬಳಿ ನೀಡಿದ್ದಲ್ಲದೆ ವಿವಿಧ ಬಿರುದು-ಬಾವಲಿ ನೀಡಿದರು. ಪಾಳೆಯಗಾರರು ಸಲ್ಲಿಸಿದ ಸೇವೆಯನ್ನು ಗುರುತಿಸಿ ಅವರಿಗೆ ಆಯಾ ಪ್ರದೇಶಗಳ ಆಳ್ವಿಕೆಯನ್ನು ನೀಡಿದರು.[೮೧]

ತುಮಕೂರು ಪ್ರದೇಶದಲ್ಲಿ ವಿಜಯನಗರ ಅರಸರು ಆಳಿದ ಬಗ್ಗೆ ಹಲವಾರು ಶಾಸನಗಳು ಈ ಭಾಗದಲ್ಲಿ ಲಭ್ಯವಾಗಿವೆ. ಬಿ.ಎಲ್.ರೈಸ್ ಸಂಪಾದನದ 'ಮೈಸೂರು ಗೆಜೆಟಿಯರ್', ಸಂಪುಟ ೨, ಕೆ.ಅಭಿಶಂಕರ ಸಂಪಾದಿತ 'ತುಮಕೂರು ಜಿಲ್ಲಾ ಗೆಜೆಟಿಯರ್'ಗಳು ಉತ್ತಮ ವಿವರಣೆ ನೀಡಿವೆ. ವಿಜಯನಗರದ ಅರಸರು ಈ ಪ್ರದೇಶದಲ್ಲಿ ನಿರ್ಮಿಸಿರುವ ಹೊಸ ಗ್ರಾಮ, ನಗರ, ಕೆರೆ-ಕುಂಟೆ, ಕೋಟೆಗಳು, ದೇವಾಲಯಗಳ ಬಗ್ಗೆ ತಿಳಿಸಲಾಗಿದೆ. ಆದರೂ ಶಾಸನ ಸಂಪುಟಗಳು, ಗೆಜೆಟಿಯರ್‌ಗಳ ಹೊರತಾಗಿ ಕೃತಿಗಳು ಲಭ್ಯವಿಲ್ಲ. ಪಾಳೆಯಗಾರರ ಕುರಿತಾಗಿ ಬಂದಿರುವ ಕೃತಿಗಳು, ಲೇಖನಗಳಲ್ಲಿ ವಿಜಯನಗರ ಅರಸರ ಉಲ್ಲೇಖನವಿದೆ. ಈ ಪ್ರದೇಶದಲ್ಲಿ ಉದಯಿಸಿದ ಬಹುತೇಕ ಪಾಳೆಯಗಾರರು ವಿಜಯನಗರ ಅರಸರ ಸಾಮಂತರಾಗಿ, ಅಧೀನರಾಗಿ ಆಳಿದರು ಎಂಬುದು ಸ್ಪಷ್ಟಪಡುತ್ತದೆ.

ಈ ಮಧ್ಯಕಾಲೀನ ಚರಿತ್ರೆಯಲ್ಲಿ ದೆಹಲಿ ಸುಲ್ತಾನರು, ವಿಜಾಪುರ ಸುಲ್ತಾನರು, ಮೊಗಲರುಗಳ ದಾಳಿ ಪ್ರಾರಂಭವಾಗಿದ್ದು ಇದನ್ನು ಸಾಂಪ್ರದಾಯಿಕ ದೃಷ್ಟಿಕೋನದಲ್ಲಿ ನೋಡಲಾಗಿದೆ. ಇವರಿಂದ ಹಿಂದೂ ಸಾಮ್ರಾಜ್ಯಗಳು ನಾಶವಾದವು ಮತ್ತು ಹಿಂದೂ ಸಂಸ್ಕೃತಿಗೆ ಪೆಟ್ಟುಬಿತ್ತು ಎಂಬಂತೆ ವಿವರಣೆ ನೀಡಲಾಗಿದೆ. ದಕ್ಷಿಣ ಭಾರತದ ಚರಿತ್ರೆಯಲ್ಲೇ ಪ್ರಖ್ಯಾತವಾದ ವಿಜಯನಗರ ಸಾಮ್ರಾಜ್ಯದ ಪತನದಿಂದ ಈ ನಿಲುವುಗಳು ಮತ್ತಷ್ಟು ಚರಿತ್ರೆ ಲೇಖನದಲ್ಲಿ ಗಟ್ಟಿಗೊಂಡವು. ಆದರೆ ವಿದ್ವಾಂಸರು ಘಟನೆಗಳನ್ನು ಸರಿಯಾಗಿ ವಿಶ್ಲೇಷಿಸದೆ ವಿದೇಶಿ ವಿದ್ವಾಂಸರ ಹೇಳಿಕೆಗಳನ್ನೇ ಭಾರತೀಯ ವಿದ್ವಾಂಸರು ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸಲು ಸ್ವತಂತ್ರ ಪೂರ್ವದಲ್ಲಿ ಪ್ರಮುಖವಾಗಿ ಬಳಸಿಕೊಂಡರು. ಆದರೆ ಈ

ನಿಲುವುಗಳು ಸ್ವತಂತ್ರದ ನಂತರವು ಪ್ರಾಮುಖ್ಯತೆಗಳಿಸಿರುವುದು ಸೋಜಿಗವೆನಿಸಿದೆ. ಬ್ರಿಟಿಷರು ವಿಭಜಿಸಿ ಆಳುವ ನೀತಿ ಹಾಗೂ ಆ ಮೂಲಕ ಹುಟ್ಟು ಹಾಕಿದ ಕೋಮು ಭಾವನೆ ಸ್ವಾತಂತ್ರ್ಯೋತ್ತರ ಅವಧಿಯಲ್ಲೂ ಮುಂದುವರಿದು ಅಚಾರಿತ್ರಿಕ ವಾದಕ್ಕೆ ಎಡೆಮಾಡಿಕೊಟ್ಟಿತು.

ವಿಜಯನಗರದ ವಿನಾಶದ ನಂತರ ಬಿಜಾಪುರ ಸುಲ್ತಾನರು ಮತ್ತು ಮೊಗಲರು ಪ್ರಾಬಲ್ಯ ಹೊಂದಿದಾಗ ತುಮಕೂರು ಪ್ರದೇಶವು ಅವರ ಆಡಳಿತಕ್ಕೆ ಒಳಪಟ್ಟಿರುವುದು ಚರಿತ್ರೆಯಲ್ಲಿ ಕಂಡುಬರುತ್ತದೆ. ಈ ವಿಷಯವಾಗಿ ಎಂ.ವಿ.ಕೃಷ್ಣರಾವ್ , ಕೆ.ಅಭಿಶಂಕರ, ಪಿ.ವಿ.ಕೃಷ್ಣಮೂರ್ತಿರವರು ತಿಳಿಸಿದ್ದಾರೆ. ಇವರ ಕೃತಿಗಳಲ್ಲಿ ನೇರವಾಗಿ ತುಮಕೂರು ಪ್ರದೇಶವನ್ನೇ ಪ್ರಧಾನವಾಗಿರಿಸಿಕೊಂಡು ಬರೆಯದಿದ್ದರೂ ಪರೋಕ್ಷವಾಗಿ ಅಲ್ಲಲ್ಲಿ ತುಮಕೂರು ಪ್ರದೇಶದ ಪ್ರಸ್ತಾವನೆಗಳಿರುವುದು ಕಂಡುಬರುತ್ತದೆ. ಇದನ್ನು ಅವಲೋಕಿಸಿದಾಗ ಈ ಭಾಗದಲ್ಲಿ ಸುಲ್ತಾನರ ಮತ್ತು ಮೊಗಲರ ಆಳ್ವಿಕೆಯನ್ನು ತಿಳಿಯಬಹುದಾಗಿದೆ.

**ಬಿಜಾಪುರ ಸುಲ್ತಾನರು :** ವಿಜಯನಗರ ಸಾಮ್ರಾಜ್ಯ ತಾಳಿಕೋಟೆ ಕದನದಿಂದ ವಿನಾಶದ ಹಾದಿ ಹಿಡಿಯಿತು. ಬಿಜಾಪುರದ ಆದಿಲ್ ಷಾಹಿಗಳು, ಬಿಜಾಪುರ ಸುಲ್ತಾನರ ಕೀರ್ತಿ ಪತಾಕೆಯನ್ನು ದಕ್ಷಿಣ ಭಾರತದಾದ್ಯಂತ ವಿಸ್ತರಿಸುವಾಗ ಮಹಮದ್ ಆದಿಲ್ ಷಾನ ದಂಡನಾಯಕ ರಣದುಲ್ಲಾಖಾನನ ಪಾತ್ರ ಪ್ರಮುಖವಾಗಿದೆ. ಕ್ರಿ.ಶ.೧೬೩೮ರಲ್ಲಿ ರಣದುಲ್ಲಾಖಾನನು ದಂಡಯಾತ್ರೆ ಕೈಗೊಂಡನು ಜೊತೆಗೆ ಶಿವಾಜಿಯ ತಂದೆ ಷಹಜಿಯನ್ನು ದ್ವಿತೀಯ ಸೇನಾಧಿಪತಿಯಾಗಿ ನಿಯೋಜಿಸಿ ಗೆದ್ದ ಪ್ರದೇಶಗಳಲ್ಲೊಂದನ್ನು ಜಹಗೀರು ಕೊಡುವ ವಾಗ್ದಾನದ ಮೇಲೆ ಕಳುಹಿಸಲಾಗಿತ್ತು. ಖಾನನು ಸಿರಾದ ಮೇಲೆ ದಾಳಿ ಮಾಡಿ ಗೆದ್ದು, ಮಲ್ಲಿಕ್ ರಿಹಾನ್‌ನನ್ನು ಸೀರಾದ ನವಾಬನನ್ನಾಗಿ ನೇಮಕ ಮಾಡಿದ[೮೨] ಎಂಬುದು ಬಿ.ಎಲ್.ರೈಸ್ ರವರ ಮೈಸೂರು ಗೆಜೆಟಿಯರ್ ಸಂಪುಟ ೨ರಲ್ಲಿ ತಿಳಿಸಲಾಗಿದೆ. ಕೆ.ಅಭಿಶಂಕರರವರು ಇದೇ ವಿವರಣೆ ನೀಡಿದ್ದಾರೆ.

ಬಿಜಾಪುರ ಸುಲ್ತಾನನು ಬೆಂಗಳೂರು, ಹೊಸಕೋಟೆ, ಕೋಲಾರ, ದೊಡ್ಡ ಬಳ್ಳಾಪುರ, ಸೀರ್ಯ, ಪ್ರಾಂತ್ಯಗಳನ್ನು ಒಟ್ಟುಗೂಡಿಸಿ ಷಹಜಿಗೆ ಜಹಗೀರಿಯಾಗಿ ನೀಡಿದರು.[೮೩] ಎಂದು ಎಂ.ವಿ.ಕೃಷ್ಣರಾವ್ ತಿಳಿಸಿದ್ದಾರೆ. ಸುಲ್ತಾನರು ಗೆದ್ದ ಪ್ರದೇಶಗಳ ಆಡಳಿತ ನಿರ್ವಹಣೆಗೆ ಸುಭೆದಾರರನ್ನು ನೇಮಿಸಿ ಜಹಾಗೀರು ನೀಡಿದ ಬಗ್ಗೆಯೂ ತಿಳಿಯುತ್ತದೆ.

**ಮೊಗಲರು :** ಮಧ್ಯಕಾಲೀನ ಭಾರತ ಚರಿತ್ರೆಯಲ್ಲಿ ಮೊಗಲರ ಆಡಳಿತ ಮಹತ್ವದ ಅಧ್ಯಾಯ ಮತ್ತು ಸುದೀರ್ಘ ಚರಿತ್ರೆಯನ್ನು ಹೊಂದಿದೆ. ತುಮಕೂರು ಪ್ರದೇಶದಲ್ಲಿ ಮೊಗಲರ ಆಡಳಿತದ ಬಗ್ಗೆ ಹೆಚ್ಚಿನ ವಿವರಗಳಿಲ್ಲ. ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್', ಬಿ.ಎಲ್.ರೈಸ್ ರವರ ಮೈಸೂರು ಗೆಜೆಟಿಯರ್ ಸಂಪುಟ-೨, ಎಂ.ವಿ.ಕೃಷ್ಣರಾವ್‌ರವರ 'ಕರ್ನಾಟಕದ ಇತಿಹಾಸ ದರ್ಶನ', ಕೃತಿಗಳಲ್ಲಿ ಇದರ ಬಗ್ಗೆ ವಿವರಣೆ ಇದೆ.

ಬಿಜಾಪುರ ಸುಲ್ತಾನರ ಆದಿಪತ್ಯ ಕ್ರಿ.ಶ.೧೬೮೬ರ ವೇಳೆಗೆ ಅಂತ್ಯ ಕಾಣುತ್ತದೆ. ಇದೇ ಸಮಯದಲ್ಲಿ ಉತ್ತರ ಭಾರತದ ಮೊಗಲರು ದಕ್ಷಿಣ ಭಾರತದಾದ್ಯಂತ ಅಧಿಕಾರ ವಿಸ್ತರಿಸಲು ಹವಣಿಸಿದರು. ಇವರು ವಿಜಯನಗರ ಸಾಮ್ರಾಜ್ಯದ ಪಾಳೆಯಪಟ್ಟುಗಳನ್ನು ಆಕ್ರಮಿಸಿ, ಹಿಂದೂ ರಾಜ್ಯಗಳನ್ನು ವಿಭಜಿಸಿ ಕಪ್ಪ-ಕಾಣಿಕೆ ಪಡೆಯಲಾರಂಭಿಸಿದರು. ಮೊಗಲ್ ಸಾಮ್ರಾಟ ಔರಂಗಜೇಬನು ಬಿಜಾಪುರಕ್ಕೆ ಅಧಿನವಾಗಿದ್ದ ಎಲ್ಲ ಪ್ರದೇಶವನ್ನು ಗೆದ್ದನು. ವಶವಾದ ಬಸವಾಪಟ್ಟಣ, ಬೂದಿಹಾಳು, ಸಿರಾ, ಪೆನುಗೊಂಡ, ಕೋಲಾರ ಹೊಸಕೋಟೆ, ದೊಡ್ಡ ಬಳ್ಳಾಪುರ ಮುಂತಾದ ಏಳು ಪರಗಣಗಳಿಗೆ ಸಿರಾವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿ ಖಾಸಿಂಖಾನ್ ಎಂಬುವನನ್ನು ಸುಭೇದಾರನನ್ನಾಗಿ ನೇಮಕ ಮಾಡಿದ. ಖಾಸಿಂಖಾನ್ ಸಿರಾವನ್ನು ಮೊಗಲರ ಪ್ರಮುಖ ಕೇಂದ್ರ ಮತ್ತು ಮಿಲಿಟರಿ ನೆಲೆಯನ್ನಾಗಿ ಪರಿವರ್ತಿಸಲು ಶ್ರಮಪಟ್ಟನು.[೮೪] ಎಂದು ಎಂ.ಎಸ್.ಪುಟ್ಟಣ್ಣ ತಿಳಿಸಿದ್ದಾರೆ. ಇದರಿಂದ ತುಮಕೂರು ಪ್ರದೇಶದ ಸ್ವಲ್ಪಭಾಗ ಮೊಗಲರ ಅಧೀನವಾಗಿರುವುದು ದೃಢಪಡುತ್ತದೆ. ಸ್ಥಳೀಯ ಪಾಳೆಯಪಟ್ಟುಗಳು ಪೊಗದಿಯನ್ನು ನೀಡುವುದರ ಮೂಲಕ ತಮ್ಮ ಸ್ವಯತ್ತತೆಯನ್ನು ಉಳಿಸಿಕೊಳ್ಳಬೇಕಾಯಿತು ಎಂದು ಸೂರ್ಯನಾಥ ಕಾಮತ್‌ರು ಹೇಳಿದ್ದಾರೆ.[೮೫] ಕ್ರಿ.ಶ.೧೭೦೭ರಲ್ಲಿ ಔರಂಗಜೇಬನ ಪತನದೊಂದಿಗೆ ಮೊಗಲರ ಆಧಿಪತ್ಯ ಕ್ಷೀಣಿಸಿತು. ಈ ನಡುವೆ ತುಮಕೂರು ಪ್ರದೇಶದಲ್ಲಿ ಅಧಿಕಾರಕ್ಕಾಗಿ ಮರಾಠರು ಮತ್ತು ಮೈಸೂರು ಒಡೆಯರುಗಳ ನಡುವೆ ಘರ್ಷಣೆಗಳು ಆರಂಭವಾದವು ಇದನ್ನು ಮುಂದೆ ವಿಶ್ಲೇಷಿಸಲಾಗಿದೆ.

**ಮೈಸೂರು ಒಡೆಯರು :** ಮೈಸೂರು ರಾಜ್ಯದ ಚರಿತ್ರೆ ದಕ್ಷಿಣ ಭಾರತದ ಚರಿತ್ರೆಯಲ್ಲಿ ಮಹತ್ವದ ಸ್ಥಾನ ಪಡೆದಿದೆ. ಯದುರಾಯ ಮತ್ತು ಕೃಷ್ಣರಾಯ ಸಹೋದರರು ಇದರ ಮೂಲಪುರುಷರು, ತುಮಕೂರು ಪ್ರದೇಶ ಮೈಸೂರು ಸಂಸ್ಥಾನಕ್ಕೆ ಸೇರಿತ್ತು ಎಂಬುದರ ಬಗ್ಗೆ ಗೆಜೆಟಿಯರ್‌ಗಳಲ್ಲಿ ಉಲ್ಲೇಖಿಸಲಾಗಿದೆ. ಕೆ.ಅಭಿಶಂಕರರವರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್', ಸಿ.ಎನ್.ಭಾಸ್ಕರಪ್ಪರವರ ಸಂಪಾದನದ 'ತುಮಕೂರು ಜಿಲ್ಲಾದರ್ಶನ', ಎಂ.ವಿ.ಕೃಷ್ಣರಾವ್‌ರವರ 'ಕರ್ನಾಟಕ ಇತಿಹಾಸ ದರ್ಶನ', ಬಿ.ಎಲ್.ರೈಸ್‌ರವರ 'ಮೈಸೂರು ಗೆಜೆಟಿಯರ್', ಸಂಪುಟ ೨ ಮೊದಲಾದವು ಅಧ್ಯಯನಕ್ಕೆ ನೆರವಾಗಿವೆ. ೧೬೩೮ರಲ್ಲಿ ಕಂಠೀರವ ನರಸರಾಜ ಒಡೆಯರ್ ಚನ್ನಪಟ್ಟಣವನ್ನು ಗೆದ್ದಾಗ ಜಗದೇವರಾಯನ ರಾಜ್ಯದೊಂದಿಗೆ ತುಮಕೂರು ಮೈಸೂರು ರಾಜ್ಯಕ್ಕೆ ಸೇರಿತು[೮೬] ಎಂದು ಕೆ.ಅಭಿಶಂಕರರವರು ತಿಳಿಸಿದ್ದಾರೆ. ನಂತರ ದೇವರಾಜ ಒಡೆಯರ್ ಕ್ರಿ.ಶ.೧೬೭೩ರಲ್ಲಿ ಹಾಸನ, ಸಕ್ಕರೆಪಟ್ಟಣ, ಚಿಕ್ಕನಾಯಕನ ಹಳ್ಳಿಗಳನ್ನು ವಶಪಡಿಸಿಕೊಂಡರು. ಚಿಕ್ಕದೇವರಾಜ ಒಡೆಯರು ಕ್ರಿ.ಶ.೧೬೭೫ರಲ್ಲಿ ರಣದುಲ್ಲಾಖಾನ್ ಮೇಲೆ ದಾಳಿ ಮಾಡಿ ಕ್ಯಾತ ಸಮುದ್ರ, ಕಂದಿಕೆರೆ, ಹಂದನಕೆರೆ, ಗೂಳೂರು, ತುಮಕೂರು, ಹೊನ್ನವಳ್ಳಿಗಳನ್ನು ಗೆದ್ದರು, ನರಸನಾಯಕನಿಂದ ಜಡಕನದುರ್ಗ (ಚಿಕ್ಕದೇವರಾಯನ ದುರ್ಗ)ವನ್ನು ಗೆದ್ದರು, ನಂತರ ಮಧುಗಿರಿ, ಬಿಜ್ಜಾವರ, ಚನ್ನರಾಯನ ದುರ್ಗವಶವಾದವು[೮೭] ಎಂಬುದು ಗೆಜೆಟಿಯರ್‌ನಿಂದ ತಿಳಿಯುತ್ತದೆ.

ಹೈದರಾಲಿ ಮೈಸೂರಿನ ಸರ್ವಾಧಿಕಾರಿಯಂತಿದ್ದು, ಕ್ರಿ.ಶ.೧೭೬೧ರಲ್ಲಿ ಸಿರಾ, ೧೭೭೬ರಲ್ಲಿ ಹಾಗಲವಾಡಿಯನ್ನು ವಶಪಡಿಸಿಕೊಂಡನು ನಂತರ ಮಧುಗಿರಿ ಅಧೀನವಾಯಿತು. ಇದು ಟಿಪ್ಪುವಿನ

ಕಾಲದಲ್ಲಿ ಮುಂದುವರೆಯಿತು. ಇದೇ ವೇಳೆ ಮೈಸೂರು ರಾಜಕೀಯದಲ್ಲಿ ಬ್ರಿಟೀಷರ ಪ್ರವೇಶವಾಯಿತು. ಇದರಿಂದ ಮೈಸೂರು ರಾಜ್ಯ ವಸಾಹತುಶಾಹಿಗಳ ಹಿಡಿತಕ್ಕೆ ಒಳಪಟ್ಟಂತೆ ಅದರ ಭಾಗವಾದ ತುಮಕೂರು ಪ್ರದೇಶ ಬ್ರಿಟಿಷರ ಆಡಳಿತಕ್ಕೆ ಒಳಗಾಗಬೇಕಾಯಿತು ಎಂಬುದು ವಿವಿಧ ಕೃತಿಗಳಲ್ಲಿ ವ್ಯಕ್ತವಾಗಿದೆ.

ವಿ.ಶಾಮರಾವ್‌ರವರ 'ಮೈಸೂರು ಸಂಸ್ಥಾನದ ಚರಿತ್ರೆ', ಎನ್.ಲಕ್ಷ್ಮಿನಾರಾಯಣರಾಯರವರ 'ಕರ್ನಾಟಕದ ಅರಸು ಮನೆತನಗಳು', ಬಿ.ರಾಮಕೃಷ್ಣರಾವ್‌ರವರ 'ಶ್ರೀಮನ್ಮಹಾರಾಜರ ವಂಶಾವಳಿ', ಎಂ.ಶ್ರೀದರಮೂರ್ತಿಯವರ 'ಒಡೆಯರು ಮತ್ತು ಮೈಸೂರು', ಎಂ.ವಿ.ಕೃಷ್ಣರಾವ್ ರವರ 'ಕರ್ನಾಟಕ ಚರಿತ್ರೆ' ಸೂರ್ಯನಾಥ ಕಾಮತ್‌ರವರ 'ಕರ್ನಾಟಕ ಸಂಕ್ಷಿಪ್ತ ಇತಿಹಾಸ', ಎಚ್.ತಿಪ್ಪೇರುದ್ರಸ್ವಾಮಿಯವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ', 'ಕರ್ನಾಟಕ ಪರಂಪರೆ' ಸಂಪುಟ-೨, ಹಸನ್ ರವರ 'ಟಿಪ್ಪುಸುಲ್ತಾನನ ಇತಿಹಾಸ', ಕೆ.ಎಸ್.ರಮಾರವರ 'ಮೈಸೂರು ಹುಲಿ ಟಿಪ್ಪುಸುಲ್ತಾನ್', ಬಿ.ಷೇಕ್ ಅಲಿಯವರ ಕರ್ನಾಟಕ ಚರಿತ್ರೆ ಸಂಪುಟಗಳು ಮುಂತಾದ ಹಲವಾರು ಕೃತಿಗಳು ಮೈಸೂರು ರಾಜ್ಯದ ಆಡಳಿತದ ವಿಚಾರವನ್ನು ತಿಳಿಸುತ್ತವೆ.

ಮೈಸೂರಿನ ಒಡೆಯರ ಆಳ್ವಿಕೆಯ ಸ್ವರೂಪವನ್ನು ತಿಳಿಸುವಲ್ಲಿ ಅಂದಿನ ಸಮಕಾಲೀನ ಚರಿತ್ರೆ ಕೃತಿಗಳು ನೆರವಾಗಿವೆ. ತಿರುಮಲಾರ್ಯನ 'ಅಪ್ರತಿಮ ವೀರ ಚರಿತ್ರೆ, 'ಚಿಕ್ಕ ದೇವರಾಜವಿಜಯ', 'ಚಿಕ್ಕದೇವರಾಜ ವಂಶಾವಳಿ', ಲಕ್ಷ್ಮೀಶನ 'ಜೈಮಿನಿ ಭಾರತ', ಸಿಂಗರಾರ್ಯನ 'ಮಿತ್ರಾವಿಂದಾಗೋವಿಂದ', ಸಂಚಿ ಹೊನ್ನಮ್ಮನ 'ಅದಿ ಬದೆಯ ಧರ್ಮ', ಚಿಕ್ಕ ದೇವರಾಜ ಒಡೆಯರ 'ಚಿಕ್ಕದೇವರಾಜ ಭಿನ್ನಪ', 'ಗೀತ ಗೋಪಾಲ', 'ಶೇಷಧರ್ಮ' ಮುಂತಾದವು ಸಹಾಯಕವಾಗಿವೆ.

## ಪಾಳೆಯಗಾರರು

ವಿಜಯನಗರ ಸಾಮ್ರಾಜ್ಯದ ಅರಸರು ಉನ್ನತಿಯಲ್ಲಿದ್ದ ಕಾಲದಲ್ಲಿ ಅವರ ಸಾಮಂತರಾಗಿ, ಅಧೀನರಾಗಿದ್ದವರು ಪಾಳೇಗಾರರು, ಪೊಗದಿ ಕೊಡುವುದರ ಮೂಲಕ ಸ್ವಯತ್ತತೆ ಉಳಿಸಿಕೊಂಡು ಆಡಳಿತ ನಡೆಸುತ್ತಿದ್ದರು. ವಿಜಯನಗರ ಅರಸರ ಆಡಳಿತ ಕ್ಷೀಣಿಸುತ್ತಿದ್ದಂತೆ ಪಾಳೆಯಗಾರರು ಸ್ವತಂತ್ರ್ಯ ಪ್ರವೃತ್ತಿ ತಳೆದು ಬಹುಬೇಗ ಹಲವಾರು ಭಾಗಗಳಲ್ಲಿ ತಮ್ಮ ಸಂಸ್ಥಾನಗಳನ್ನು ನೆಲೆಗೊಳಿಸಿದರು. ಈ ಪಾಳೆಯಗಾರರ ಆಡಳಿತ, ಅಧಿಕಾರ ವಿಸ್ತರಣೆ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಶೇಷತೆಯನ್ನು ತಿಳಿಯಲು ಹಲವಾರು ವಿದ್ವಾಂಸರ ಕೃತಿಗಳು ಮತ್ತು ಲೇಖನಗಳು ಲಭ್ಯವಾಗಿವೆ. ಎಂ.ವಿ.ವಸುರವರ ಸಂಪಾದಿಸಿರುವ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು' ಎಂಬ ಕೃತಿಯಲ್ಲಿ ತುಮಕೂರು ಪ್ರದೇಶದ ಪಾಳೆಯಗಾರರ ಚರಿತ್ರೆಗೆ ಸಂಬಂಧಿಸಿದ ಲೇಖನಗಳಿವೆ. 'ನಿಡಗಲ್ಲು ನಾಯಕರು' ಎಂಬ ಲೇಖನವನ್ನು ಡಿ.ಎನ್.ಯೋಗೀಶ್ವರಪ್ಪ, 'ಪಾವಗಡದ ಪಾಳೆಯಗಾರರು' ಲೇಖನವನ್ನು ಎಸ್.ನಾಗರತ್ನಮ್ಮ, ಸಿರಾ ಪಾಳೆಯಗಾರರು ಎಂಬ ಲೇಖನವನ್ನು ಎಂ.ಎಸ್.ಪ್ರಭಾಕರ್, 'ಸಿರಾದ ಸುಭೇದಾರರು' ಎಂಬ ಲೇಖನವನ್ನು

ಎಂ.ವಿ.ವಸು, 'ಹಾಗಲವಾಡಿ ಅಮರ ನಾಯಕರು' ಎಂಬ ಲೇಖನವನ್ನು ಎನ್.ಯೋಗೀಶ್ವರಪ್ಪ 'ಗುಬ್ಬಿಹೊಸಹಳ್ಳಿ ಸಂಸ್ಥಾನದ ಪಾಳೆಯಗಾರರು' ಲೇಖನವನ್ನು ಜಿ.ಎಂ.ಶ್ರೀನಿವಾಸಯ್ಯ, 'ಬಿಜ್ಜಾವರ ಮಹಾನಾಡ ಪ್ರಭುಗಳು' ಎಂಬ ಲೇಖನವನ್ನು ಆರ್.ಕಾವಲಮ್ಮರವರು ಬರೆದಿದ್ದಾರೆ. ಇದೇ ಅಲ್ಲದೆ ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರ 'ಕರ್ನಾಟಕ ಇತಿಹಾಸ ದರ್ಶನ' ಎಂ.ಎಂ.ಕಲ್ಬುರ್ಗಿಯವರ 'ಮಹಾನಾಡ ಪ್ರಭುಗಳು' ಕೃತಿ, ಡಿ.ವಿ.ಪರಮಶಿವಮೂರ್ತಿಯವರ 'ಸಂಶೋಧನೆಯ ಸಿರಿ', ಕೆ.ಅಭಿಶಂಕರವರ 'ತುಮಕೂರು ಜಿಲ್ಲಾ ಗೆಜೆಟಿಯರ್' ಮೊದಲಾದವು ಅಧ್ಯಯನಕ್ಕೆ ನೆರವಾಗಿವೆ.

ತುಮಕೂರು ಪ್ರದೇಶದಲ್ಲಿ ಹಲವಾರು ಪ್ರಬಲ ರಾಜಮನೆತನಗಳು ಆಳಿರುವಂತೆ ಪಾಳೆಯಗಾರರ ಆಳ್ವಿಕೆ ಈ ಪ್ರದೇಶದಲ್ಲಿ ನಡೆದಿದೆ ಎಂಬುದಕ್ಕೆ ಅವರು ನಿರ್ಮಿಸಿರುವ ದೇವಾಲಯಗಳು, ಕೋಟೆ-ಕೊತ್ತಲುಗಳು, ಕೆರೆ-ಕುಂಟೆಗಳು ಸಾಕ್ಷಿಯಾಗಿ ಉಳಿದಿವೆಯಲ್ಲದೆ, ನೋಡುಗರನ್ನು ವಿಸ್ಮಯಗೊಳಿಸುತ್ತವೆ. ಇಂತಹ ಪಾಳೆಯಗಾರರಲ್ಲಿ ನಿಡಗಲ್ಲು ನಾಯಕರು, ಪಾವಗಡ ಪಾಳೆಯಗಾರರು, ಹಾಗಲವಾಡಿನಾಯಕರು, ಗುಬ್ಬಿ ಹೊಸಹಳ್ಳೀಯ ಪಾಳೆಯಗಾರರು, ಹೊಳವನಹಳ್ಳಿ ಪಾಳೆಯಗಾರರು, ಸಿರಾದ ಪಾಳೆಯಗಾರರು ಬಿಜ್ಜಾವರ ಮಹಾನಾಡ ಪ್ರಭುಗಳು ಮುಂತಾದವರು ಪ್ರಮುಖರಾಗಿದ್ದಾರೆ.

ಪಾಳೆಯಗಾರರು ವಿಜಯನಗರ ಅರಸರ ಆಡಳಿತಕ್ಕೆ ಭದ್ರಕೋಟೆಯಂತಿದ್ದು, ಈ ಸಾಮ್ರಾಜ್ಯದ ಚರಿತ್ರೆಯಷ್ಟೆ ಮಹತ್ವ ಪಡೆದು ತುಮಕೂರು ಪ್ರದೇಶದ ಚರಿತ್ರೆಯಲ್ಲಿ ಗಮನಾರ್ಹ ಸ್ಥಾನ ಪಡೆದಿದ್ದಾರೆ. ಇವರ ಆಡಳಿತದ ವೈಖರಿ, ಹೋರಾಟದ ಬಗೆಗಳು, ಸಾಂಸ್ಕೃತಿಕ ಕೊಡುಗೆಗಳು ತುಮಕೂರು ಪ್ರದೇಶದ ಘನತೆಯನ್ನು ಮತ್ತಷ್ಟು ಹೆಚ್ಚಿಸಿವೆ. ಪ್ರಾಚೀನ ಮತ್ತು ಮಧ್ಯಕಾಲೀನ ಅವಧಿಯಲ್ಲಿ ಹುಟ್ಟಿದ ಪ್ರಬಲ ರಾಜಮನೆತನಗಳು ಮೂಲತಃ ಇಲ್ಲಿ ಹುಟ್ಟದಿದ್ದರೂ ವಿಜಯನಗರ ಮತ್ತು ನಂತರದ ಕಾಲಾವಧಿಯಲ್ಲಿ ಸ್ವತಂತ್ರ ನಾಯಕರಾಗಿ ಆಳಿ ತಮ್ಮದೇ ವಿಶಿಷ್ಟ ಕೊಡುಗೆಗಳನ್ನು ನೀಡಿರುವುದು ಪಾಳೆಯಗಾರರ ಚರಿತ್ರೆಯಿಂದ ತಿಳಿದುಬರುತ್ತದೆ. ಇವುಗಳನ್ನು ದಕ್ಷಿಣ ಕರ್ನಾಟಕದ ಅರಸು ಮನೆತನಗಳು ಎಂಬುದಾಗಿ ಹಲವು ಕೃತಿಗಳಲ್ಲಿ ಉಲ್ಲೇಖಿಸಲಾಗಿದೆ.

**ನಿಡಗಲ್ಲು ಪಾಳೆಯಗಾರರು :** ನಿಡಗಲ್ಲು ಇಂದು ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕಿನ ಹೋಬಳಿ ಕೇಂದ್ರವಾಗಿದೆ. ಇದಕ್ಕೆ ನೀಲಾವತಿ, ಕಾಲಾಂಜನ, ಕಾಳಾಂಜನಗಿರಿ ಎಂದು ಕರೆಯುವರು. ಈ ಭೂಭಾಗವನ್ನು ಗಂಗರು, ನೊಳಂಬರು, ಪಲ್ಲವರು, ಚಾಲುಕ್ಯರು, ಹೊಯ್ಸಳರು ಆಳ್ವಿಕೆ ಮಾಡಿದ್ದಾರೆ. ವಿಜಯನಗರದ ಕಾಲದಲ್ಲಿ ಚಿಕ್ಕ ಪುಟ್ಟ ಸ್ವತಂತ್ರ ರಾಜಮನೆತನಗಳು ಉದಯವಾದುದು ಈ ಭಾಗದ ರಾಜಕೀಯ ಇತಿಹಾಸದ ಮೇಲೆ ಪರಿಣಾಮವನ್ನುಂಟು ಮಾಡಿವೆ.[೮೮] ನಿಡಗಲ್ಲು ನಾಯಕರ ಕುರಿತು ಇದುವರೆಗೂ ದೊರಕಿರುವ ಶಾಸನಗಳನ್ನು ಪರಿಶೀಲಿಸಿದಾಗ ಕ್ರಿ.ಶ.೧೪೮೭ರ ಶಾಸನವೇ ಮೊದಲನೆಯದಾಗಿದೆ. ಇದರಲ್ಲಿ ಚಿಕ್ಕತಿಪ್ಪನೃಪ ಎಂಬುವನು ನಿಡಗಲ್ಲು ದುರ್ಗವನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ.[೮೯] ಎಂಬುದಾಗಿ ಡಿ.ವಿ.ಪರಮಶಿವಮೂರ್ತಿ ತಿಳಿಸಿದ್ದಾರೆ. ಇವರ ಸಮಗ್ರ ಇತಿಹಾಸವನ್ನು

ರಚಿಸಲು ಆಧಾರಗಳ ಕೊರತೆ ಕಂಡುಬರುತ್ತದೆ. ಇವರ ಸಮಕಾಲೀನರಾಗಿ ಆಳ್ವಿಕೆ ಮಾಡುತ್ತಿದ್ದ ಚಿತ್ರದುರ್ಗ, ಹರತಿನಾಯಕರು, ಸಿರಾ ನವಾಬರ, ಇತಿಹಾಸದಲ್ಲಿ ಅಲ್ಲಲ್ಲಿ ಇವರ ಉಲ್ಲೇಖನ ಕಾಣುತ್ತದೆ. ನಿಡಗಲ್ಲು ನಾಯಕರಿಗೆ ಸಂಬಂಧಪಟ್ಟ ೧೩ ಶಿಲಾಶಾಸನಗಳು ರೈಸ್‌ರವರ ಎಫಿಗ್ರಾಫಿಯಾ ಕರ್ನಾಟಕದ ೧೨ ಮತ್ತು ೧೬ನೇ ಸಂಪುಟದಲ್ಲಿ ಮತ್ತು ಮೈಸೂರು ಆರ್ಕಿಯೋಲಾಜಿಕಲ್ ಸರ್ವೇ ಸಂಪುಟದಲ್ಲೂ ಪ್ರಕಟವಾಗಿವೆ.[೬೦] ನಿಡಗಲ್ಲು ನಾಯಕ ವಂಶದ ಮೂಲ ಪುರುಷನು ಬಿಜಾಪುರ ಪ್ರಾಂತದಿಂದ ಬಂದವನೆಂದೂ ವಿಜಯನಗರದ ಅರಸ ಕೃಷ್ಣದೇವರಾಯ ತಿಪ್ಪಣ್ಣನಾಯಕನಿಗೆ ಚಿತ್ರದುರ್ಗ ಜಿಲ್ಲೆಯ ಪೂರ್ವಭಾಗದಲ್ಲಿ ಒಂದಿಷ್ಟು ಭೂಮಿಯನ್ನು ನೀಡಿದ, ತಿಪ್ಪಣ್ಣನಾಯಕ ಮಜ್ಜಿಸಮುದ್ರ, ಗೋಸಿಕೆರೆ, ಚಳ್ಳಕೆರೆ ಎಂಬಲ್ಲಿ ನೆಲಸಿ ಅವುಗಳಿಗೆ ದೊಡ್ಡೇರಿ ಹಾರ್ತಿ ಎಂದು ಹೆಸರಿಟ್ಟ ಎಂಬುದಾಗಿ ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ ತಿಳಿಸಿದ್ದಾರೆ.[೬೧] ಒಟ್ಟಾರೆ ನಿಡಗಲ್ಲು ನಾಯಕರ ವಂಶಾವಳಿಯ ಬಗ್ಗೆ ಚರಿತ್ರಾಕಾರರಲ್ಲೆ ಇನ್ನೂ ಭಿನ್ನಾಭಿಪ್ರಾಯಗಳಿವೆ. ಈ ವಂಶಾವಳಿಯಲ್ಲಿ ಬರುವ ಮೂಲಪುರುಷ ತಿಪ್ಪರಾಜನೇ, ಕ್ರಿ.ಶ.೧೪೮೭ರ ಶಾಸನದಲ್ಲಿ ಉಲ್ಲೇಖನ ಮಾಡಿರುವ ಚಿಕ್ಕತಿಪ್ಪರಾಜೇಂದ್ರನೇ ಎಂದು ಸ್ಪಷ್ಟವಾಗಿದೆ ಎಂಬುದಾಗಿ ಡಿ.ಎನ್.ಯೋಗೀಶ್ವರಪ್ಪ ಲೇಖನದಿಂದ ತಿಳಿಯುತ್ತದೆ.[೬೨] ಚಿಕ್ಕತಿಪ್ಪರಾಜೇಂದ್ರನ ನಂತರ ರಾಮನಾಯಕ, ಅಬ್ಬಿನಾಯಕ, ಬೊಮ್ಮನಾಯಕ ರಾಜ್ಯವಾಳಿದರು ಎಂಬುದಾಗಿ ಉಲ್ಲೇಖಿಸಲಾಗಿದೆ. ಹೀಗೆ ಈ ವಂಶಜರ ಆಳ್ವಿಕೆ ಮುಂದುವರೆಯುತ್ತದೆ. ಕ್ರಿ.ಶ.೧೭೬೧ರಲ್ಲಿ ಹೈದರಾಲಿ ನಿಡಗಲ್ಲನ್ನು ಹಿಡಿದಾಗ ಆಗಿನ ನಾಯಕನಾಗಿದ್ದ ತಿಮ್ಮಣ್ಣನಾಯಕ ಹೈದರಾಲಿಗೆ ಶರಣಾದನು ಎಂಬುದಾಗಿ ಎಂ.ವಿ.ಕೃಷ್ಣರಾವ್ ತಿಳಿಸಿದ್ದಾರೆ.[೬೩] ಟಿಪ್ಪು ಸುಲ್ತಾನನು ನಿಡಗಲ್ಲನ್ನು ಸಂಪೂರ್ಣವಾಗಿ ಹಿಡಿದನು. ರೋಗಪೀಡಿತನಾದ ತಿಮ್ಮಣ್ಣನಾಯಕ ಮರಣಿಸಿದ ತಿಮ್ಮಣ್ಣನಾಯಕ ಮಕ್ಕಳಾದ ಹೊಣ್ಣೆನಾಯಕ ಮತ್ತು ಇಮ್ಮಡಿ ಹೊಟ್ಟೆಣ್ಣ ನಾಯಕರು ಸೆರೆಯಾದರು. ಕ್ರಿ.ಶ.೧೭೯೯ರಲ್ಲಿ ಟಿಪ್ಪುಸುಲ್ತಾನ ನಾಲ್ಕನೇ ಮೈಸೂರು ಯುದ್ಧದಲ್ಲಿ ಮೃತನಾದ ಬಳಿಕ ಮೈಸೂರು ಬ್ರಿಟಿಷರ ವಶವಾಯಿತು. ಮೈಸೂರು ಸಂಸ್ಥಾನವನ್ನು ವಿಭಜನೆ ಮಾಡಿದಾಗ ನಿಡಗಲ್ಲು ಮೈಸೂರು ರಾಜಮನೆತನದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಸೇರಿತು.[೬೪] ಎಂಬುದಾಗಿ ಎಂ.ವಿ.ವಸುರವರ ಸಂಪಾದಿತ ಕೃತಿ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು' ಕೃತಿಯಲ್ಲಿ ಉಲ್ಲೇಖಿಸಲಾಗಿದೆ. ಎಂ.ವಿ.ಕೃಷ್ಣರಾವ್ ಮತ್ತು ಎಶ.ಕೇಶವ ಭಟ್ಟ ಇದೇ ವಿವರಣೆ ನೀಡಿದ್ದಾರೆ. ಡಿ.ವಿ.ಪರಮಶಿವಮೂರ್ತಿಯವರು ಇದೇ ಅಂಶದ ಬಗ್ಗೆ ಸಂಶೋಧನೆಯ ಸಿರಿಯಲ್ಲಿ ಉಲ್ಲೇಖಿಸಿದ್ದಾರೆ. ಆದರೆ ತಿಮ್ಮಣ್ಣ ನಾಯಕ ಮತ್ತು ಟಿಪ್ಪು ಸುಲ್ತಾನರ ನಡುವಿನ ಸಂಬಂಧಕ್ಕೆ ಸಂಬಂಧಿಸಿದಂತೆ ಕಾಲಾವಧಿಯ ವ್ಯತ್ಯಾಸ ಕಂಡುಬಂದಿದೆ.

ನಿಡಗಲಿನ ಚಿಕ್ಕತಿಪ್ಪರಾಜೇಂದ್ರನ ವಂಶದವರು ವಿಜಯನಗರ ಸಂಗಮ ಸಂತತಿಯ ಕಾಲದಿಂದ ತಾಳಿಕೋಟೆ ಕದನದವರೆಗೆ ಆಳ್ವಿಕೆ ನಡೆಸಿದರೆ, ಹರತಿ ವೀರಹೊಟ್ಟೆಣ್ಣ ನಾಯಕ ವಂಶದವರು ಕ್ರಿ.ಶ.೧೬೩೫ ರಿಂದ ಟಿಪ್ಪು ಸುಲ್ತಾನನ ಪತನದವರೆಗೂ ಆಳ್ವಿಕೆ ನಡೆಸಿದರು. ನಿಡಗಲ್ಲು ಸಂಸ್ಥಾನ

ಸ್ಥಾಪನೆಯಾದುದು ವಿಜಯನಗರ ಅರಸರ ಪ್ರೇರಣೆಯಿಂದ, ಇವರಿಗೆ ಕೃಷ್ಣದೇವರಾಯರು ಮತ್ತು ಎರಡನೇ ವೆಂಕಟಪತಿಯವರು ಅಮರ ನಾಯಕತ್ವ ನೀಡಿದರು. ನಿಡಗಲು ಸಂಸ್ಥಾನ ಅತ್ಯಂತ ಚಿಕ್ಕ ಮನೆತನವಾಗಿ ಕಂಡರೂ ಬದುಕಿನ ಹೋರಾಟದಲ್ಲಿ ಮುತ್ಸದ್ದಿತನವನ್ನು ತೋರಿತು. ಅಂದಿನ ರಾಜಕೀಯ ಪಕ್ಷುಬ್ಧತೆಯ ಕಾಲದಲ್ಲಿಯೂ ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಲು ಸರ್ವಪ್ರಯತ್ನ ಮಾಡಿ ವಿಫಲರಾದರು.

**ಪಾವಗಡ ಪಾಳೆಯಗಾರರು :** ತುಮಕೂರು ಪ್ರದೇಶದಲ್ಲಿ ಆಳಿದ ಈ ಪಾಳೆಯಗಾರರ ವಿಶೇಷತೆ ತಿಳಿಯಲು ಬಿ.ಎಲ್.ರೈಸ್ ರವರ 'ಮೈಸೂರು ಗೆಜೆಟಿಯರ್', ಸಂಪುಟ ೨ ಸೂರ್ಯನಾಥ ಕಾಮತ್‌ರವರ ಸಂಪಾದನದ 'ಕರ್ನಾಟಕ ರಾಜ್ಯ ಗೆಜೆಟಿಯರ್', ಭಾಗ ೧, ವಿ.ಆರ್.ಚೆಲುವರಾಜನ್‌ರವರ 'ಪಾವಗಡ ತಾಲ್ಲೂಕು ದರ್ಶನ', ಎಂ.ವಿ.ವಸುರವರ ಸಂಪಾದನದ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು', ಸಿ.ಎನ್. ಭಾಸ್ಕರಪ್ಪರವರ ಸಂಪಾದನದ 'ತುಮಕೂರು ಜಿಲ್ಲಾ ದರ್ಶನ', ಎಸ್.ನಂಜುಂಡಸ್ವಾಮಿಯವರ, 'ಕರ್ನಾಟಕ ಪಾಳೆಯಗಾರರು ಮತ್ತು ಒಡೆಯರು', ಆರ್.ಆರ್.ದಿವಾಕರ್‌ರವರ 'ಕರ್ನಾಟಕ ಪರಂಪರೆ', ಸಂಪುಟ ೧, ಎಂ.ಎಂ. ಕಲಬುರ್ಗಿಯವರ 'ಮಹಾನಾಡ ಪ್ರಭುಗಳು', ಎಂ.ಡಿ.ಶ್ರೀನಿವಾಸರವರ 'ಮಧುಗಿರಿ ಇತಿಹಾಸ', ಬಿ.ಎಲ್.ರೈಸ್‌ರವರ 'ಎಫಿಗ್ರಾಫಿಯ ಕರ್ನಾಟಕ', ಸಂಪುಟ ೧೨ ಮುಂತಾದ ಕೃತಿಗಳು ನೆರವಾಗಿವೆ.



ಪಾವಗಡವು ಬಲ್ಲಪ್ಪನಾಯಕ ಮತ್ತು ವೆಂಕಟಪತಿ ತಿಮ್ಮಪ್ಪನಾಯಕ ಎಂಬುವರಿಂದ ಆಳಲ್ಪಟ್ಟಿತು. ಇವರ ಪೂರ್ವಿಕರು ವಿಜಯನಗರ ಅರಸರ ಕಾಲದಲ್ಲಿ ಭಂಡಾರ ರಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಚಿಕ್ಕಬಳ್ಳಾಪುರದ ಹಾವಳಿ ಭೈರೇಗೌಡನ ಆಶ್ರಯವನ್ನು ಬಲ್ಲಪ್ಪ ಮತ್ತು ಸೋದರರು ಪಡೆದರು ಎಂಬುದಾಗಿ ಬಿ.ಎಲ್.ರೈಸ್ ತಿಳಿಸಿದ್ದಾರೆ.[೬೫] ವಿಜಯನಗರದ ಅರಸ ವೆಂಕಟಪತಿ ಮಹಾರಾಜನ ಮೆಚ್ಚುಗೆಗೆ ಪಾತ್ರನಾದ ಬಲ್ಲಪ್ಪ ಪಾವಗಡ ಮತ್ತು ಪಳವಳ್ಳಿಗಳ ಅಧಿಕಾರ ಪಡೆದನು. ಕ್ರಿ.ಶ.೧೫೮೫ರಲ್ಲಿ ಬಲ್ಲಪ್ಪನಾಯಕನಾಗಿ ಖ್ಯಾತಿಗೆ ಬಂದು ಕೋಟೆ ಕೊತ್ತಲುಗಳನ್ನು ನಿರ್ಮಿಸಿ ಪಾವಗಡದಲ್ಲಿ ಆಳ್ವಿಕೆ ಆರಂಭಿಸಿದ ಎಂಬುದಾಗಿ ವಿ.ಆರ್.ಚೆಲುವರಾಜನ್‌ರವರ 'ಪಾವಗಡ ತಾಲ್ಲೂಕು ದರ್ಶನ'ದಲ್ಲಿ ಉಲ್ಲೇಖಿತವಾಗಿದೆ. ಬಲ್ಲಪ್ಪನಾಯಕನ ನಂತರ ಅಧಿಕಾರಕ್ಕೆ ಬಂದ ನಾಯಕರ ವಿವರ ಹೆಚ್ಚು ಲಭ್ಯವಾಗಿಲ್ಲ, ಕ್ರಿ.ಶ.೧೭೭೭ರಲ್ಲಿ ಹೈದರಾಲಿ ಪಾವಗಡ ಹಿಡಿದನು. ಮೊಘಲರು, ಮುಸ್ಲಿಮರು, ಬ್ರಿಟಿಷರ ಅಧಿಪತ್ಯ ಈ ಪ್ರದೇಶದಲ್ಲಿತ್ತು, ಕೊನೆಯ ನಾಯಕ ವೆಂಕಟಪತಿ ತಿಮ್ಮಪ್ಪ ಹೈದರಾಲಿಗೆ ಕಪ್ಪವನ್ನು ನೀಡುತ್ತಿದ್ದ.[೬೬] ಕ್ರಿ.ಶ.೧೭೯೯ರ ಮೈಸೂರು ಯುದ್ಧದ ನಂತರ ಪಾವಗಡ ಬ್ರಿಟಿಷರ ಅಧೀನವಾಯಿತು.

**ಸಿರಾ ಪಾಳೆಯಗಾರರು :** ಹರತಿ, ನಿಡುಗಲ್ಲು, ಸಿರಾಗಳಲ್ಲಿ ಆಳ್ವಿಕೆ ನಡೆಸಿದ ಪಾಳೆಯಗಾರರು ವಿಜಯನಗರ ಅರಸರ ಅದೀನರಾಗಿ ಆಳಿದರು, ಹರತಿಯ ದುಂಡಪ್ಪನಾಯಕ ಮಗ ಲಕ್ಷ್ಮೀಪತಿನಾಯಕ ಬಗ್ಗೆ ಒರಿಯೂರು ತಾಲ್ಲೂಕಿನ ಯಮಡಾಳು ಶಾಸನ ಗುರುತಿಸುತ್ತದೆ.[೬೭] ಲಕ್ಷ್ಮೀಪತಿ ನಾಯಕ ಸಿರಾದಲ್ಲಿ ಆಳ್ವಿಕೆ

ನಡೆಸಿದ ಬಗ್ಗೆ ಹಲವು ಕೃತಿಗಳಲ್ಲಿ ವಿವರಿಸಲಾಗಿದೆ. ಎಂ.ಎಸ್.ಪ್ರಭಾಕರ್‌ರವರ 'ಹರತಿ ಬಯಲಿನ ರಾಜಕೀಯ ಚರಿತ್ರೆ', ಲಕ್ಷ್ಮಣ್ ತೆಲಗಾವಿರವರ ಸಂಪಾದನದ 'ಹರತಿ ಸಿರಿ', ಎಂ.ವಿ.ಚಿತ್ರಲಿಂಗಯ್ಯರವರ 'ಹರತಿ ಪಾಳೆಯಗಾರರ ಮೂಲ ವಂಶಾವಳಿ', ಎಂ.ಎಸ್.ಪುಟ್ಟಣ್ಣನವರ 'ಚಿತ್ರದುರ್ಗದ ಪಾಳೆಯಗಾರರು', ಕೆ.ಅಭಿಶಂಕರ್‌ರವರ ಸಂಪಾದನದ 'ತುಮಕೂರು ಜಿಲ್ಲಾ ಗೆಜೆಟಿಯರ್' ಸಹಾಯಕವಾಗಿವೆ.

ಹರತಿಯ ಲಕ್ಷ್ಮೀಪತಿ ನಾಯಕನಿಗೆ ರಂಗಪ್ಪನಾಯಕ ಮತ್ತು ಚಿಕ್ಕರಂಗಪ್ಪ ನಾಯಕರೆಂಬ ಮಕ್ಕಳಿದ್ದು, ರಂಗಪ್ಪನಾಯಕ ಸಿರಾ ಸೀಮೆಯಲ್ಲಿ ಆಡಳಿತ ನಡೆಸಿದನು[೯೮] ಎಂಬುದಾಗಿ ಶಾಸನ ಸಂಪುಟದಿಂದ ತಿಳಿಯುತ್ತದೆ. ಚಿತ್ರದುರ್ಗದ ಪಾಳೆಯಗಾರ ಕಸ್ತೂರಿ ರಂಗಪ್ಪನು ಸಿರಾ ಪಾಳೆಯಗಾರರೊಂದಿಗೆ ವೈವಾಹಿಕ ಸಂಬಂಧ ಬೆಳೆಸಿದ್ದನ್ನು ಎಂ.ಎಸ್.ಪುಟ್ಟಣ್ಣ ಉಲ್ಲೇಖಿಸಿದ್ದಾರೆ. ಶಿರಾದ ಪಾಳೆಯಗಾರರನ್ನು ತಮ್ಮೆಡೆಗೆ ಸೆಳೆಯುವ ಸಲುವಾಗಿ ರಕ್ತಸಂಬಂಧ ಬೆಳೆಸಿ ಪ್ರಯತ್ನಿಸಿರಲು ಸಾಧ್ಯವಿದೆ. ಸಿರಾವನ್ನು ಲಕ್ಷ್ಮಿಪತಿನಾಯಕ (ಕ್ರಿ.ಶ.೧೫೪೯) ರಂಗಪ್ಪನಾಯಕ (ಕ್ರಿ.ಶ.೧೫೮೦) ಚಿಕ್ಕರಂಗಪ್ಪನಾಯಕ (ಕ್ರಿ.ಶ.೧೫೯೨) ಇಮ್ಮಡಿ ರಂಗಪ್ಪನಾಯಕ (ಕ್ರಿ.ಶ.೧೬೧೨) ಮುಮ್ಮಡಿ ರಂಗಪ್ಪನಾಯಕ(೧೬೩೬) ಆಳಿದ ಬಗ್ಗೆ ಉಲ್ಲೇಖನವಿದೆ. ಸಿರಾಭಾಗವು ಬಿಜಾಪುರ ಸುಲ್ತಾನರ ವಶವಾಯಿತೆಂದೂ, ಕ್ರಿ.ಶ.೧೬೩೦ರಿಂದ ಕ್ರಿ.ಶ.೧೬೫೧ರವರೆಗೆ ಮಲ್ಲಿಕ್ ರಿಹಾನ್ ಎಂಬ ಸುಭೇದಾರನ ಆಳ್ವಿಕೆಯಲ್ಲಿತ್ತು. ನಂತರ ಮೊಘಲರ ಹಿಡಿತಕ್ಕೆ ಒಳಪಟ್ಟು, ಖಾಸಿಂ ಖಾನ್ ಎಂಬ ಸುಭೇದಾರ ಆಳಿದ ಎಂದು ಶಾಸನ ಸಂಪುಟದಿಂದ ತಿಳಿದುಬರುತ್ತದೆ.[೯೯]

**ಸಿರಾ ನವಾಬರು :** ಸಿರಾವು ಮೈಸೂರು ಮತ್ತು ಬಿಜಾಪುರ ರಾಜ್ಯಕ್ಕೂ ಮಧ್ಯಭಾಗದಲ್ಲಿದ್ದು, ಆಯಕಟ್ಟಿನ ಪ್ರದೇಶವಾಗಿತ್ತು. ಬಿಜಾಪುರದ ಸುಲ್ತಾನ ಮಹಮದ್ ಅದಿಲ್ ಷಾನ ದಂಡನಾಯಕ ರಣದುಲ್ಲಾಖಾನ್ ಸಿರಾ ಕೋಟೆಗೆ ಮುತ್ತಿಗೆ ಹಾಕಿದನು. ರತ್ನಗಿರಿಯ ಪಾಳೆಯಗಾರ ರಂಗಪ್ಪರಾಜ ಬಲವಾಗಿ ಪ್ರತಿಭಟಿಸಿದ ಆದರೂ ಪ್ರಯೋಜವಾಗಲಿಲ್ಲ. ಸಿರಾ ಮತ್ತು ಅದರ ಅವಲಂಬಿತ ಪ್ರಾಂತ್ಯವನ್ನು ಗೆದ್ದ ಖಾನನು ಈ ಭಾಗಕ್ಕೆ ಮಲ್ಲಿಕ್ ರಿಹಾನ್ ಎಂಬುವನನ್ನು ಸುಭೇದಾರನನ್ನಾಗಿ ನೇಮಕ ಮಾಡಿದ.[೧೦೦] ಹೀಗೆ ಆರಂಭ ಕಂಡ ಸಿರಾ ನವಾಬರ ಆಳ್ವಿಕೆ ಚರಿತ್ರೆಯಲ್ಲಿ ಮಹತ್ವ ಪಡೆದಿದೆ. ನವಾಬರ ಕುರಿತು ಬಂದಿರುವ ಕೃತಿಗಳು ಮತ್ತು ಲೇಖನಗಳು ಅಧ್ಯಯನಕ್ಕೆ ನೆರವಾಗಿವೆ.

ಲಕ್ಷ್ಮಣ್ ತೆಲಗಾವಿಯವರ ಹರತಿಸಿರಿ, ಎಂ.ಎಸ್ .ಪುಟ್ಟಣ್ಣರವರ 'ಚಿತ್ರದುರ್ಗಪಾಳೆಯಗಾರರು', ಹಯವದನರಾವ್‌ರವರ 'ಹಿಸ್ಟರಿ ಆಫ್ ಮೈಸೂರು', ಬಿ.ಎಲ್.ರೈಸ್ 'ಗೆಜೆಟಿಯರ್', ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್', ಡಿ.ಎನ್.ಯೋಗೀಶ್ ಸಂಪಾದನ 'ಜಯಮಂಗಲಿ' ಸ್ಮರಣಸಂಚಿಕೆ ಮುಂತಾದ ಹಲವು ಕೃತಿಗಳಲ್ಲಿ 'ಸಿರಾ ನವಾಬರ ಚರಿತ್ರೆಯ' ಉಲ್ಲೇಖವಿದೆ.

ಮೊಗಲರ ಔರಂಗಜೇಬನು ಗೋಲ್ಕಂಡ ಮತ್ತು ಬಿಜಾಪುರಗಳನ್ನು ವಶಪಡಿಸಿಕೊಂಡ ಬಳಿಕ ಈ ಪ್ರದೇಶಗಳ ಆಡಳಿತ ನಿರ್ವಹಣೆಗೆ ಭಕ್ಷಿಗಳು, ಮನ್‌ಸಬ್‌ದಾರರು, ಸುಭೇದಾರರು, ದೇಸಾಯಿಗಳು

ಎಂಬ ಅಧಿಕಾರಿಗಳನ್ನು ನೇಮಕ ಮಾಡಿದ. ಇಂತಹ ಸಮಯದಲ್ಲಿ ಬಸವಾಪಟ್ಟಣ, ಬೂದಿಹಾಳು, ಸಿರಾ, ಪೆನುಗೊಂಡ, ಕೋಲಾರ, ಹೊಸಕೋಟೆ, ದೊಡ್ಡಬಳ್ಳಾಪುರ ಮುಂತಾದ ಏಳು ಪರಗಣಗಳಿಗೆ ಸಿರಾವನ್ನು ಆಡಳಿತ ಕೇಂದ್ರವನ್ನಾಗಿ ಮಾಡಿ ಖಾಸಿಂಖಾನ್ ಎಂಬುವನನ್ನು ಸುಭೇದಾರನನ್ನಾಗಿ ನೇಮಕ ಮಾಡಿದ[೧೦೧] ಎಂಬುದಾಗಿ ಎಂ.ಎಸ್.ಪುಟ್ಟಣ ತಿಳಿಸಿದ್ದಾರೆ. ಮೊಗಲರು ದಕ್ಷಿಣ ಭಾಗದಲ್ಲಿ ಹಿಡಿತ ಸಾಧಿಸಲು ನವಾಬರ ಪಾತ್ರ ಹಿರಿದಾದು ಎಂಬುದು ಇದರಿಂದ ಸ್ಪಷ್ಟಪಡುತ್ತದೆ.

ಖಾಸಿಂಖಾನ್, ಜುಲ್ಪಿಕರ್ ಖಾನ್, ದಿಲಾವರ್ ಖಾನ್ ಸೇರಿದಂತೆ ಹಲವಾರು ನವಾಬರು ಕಾಲಾನುಕ್ರಮವಾಗಿ ಮೊಗಲರ ಕೈಕೆಳಗೆ ಆಳಿರುವುದು ಮೆಕೆಂಜಿ ಸಂಗ್ರಹದಿಂದ ತಿಳಿದುಬರುತ್ತದೆ.[೧೦೨] ಕ್ರ.ಶ.೧೭೪೨ರಲ್ಲಿ ತಾಹರ್ ಖಾನನ ಸ್ಥಾನದಲ್ಲಿ ದಿಲಾವರ್ ಖಾನನು ಸಿರಾದ ನವಾಬನಾದ. ಇವನು ಸಿರಾ ನಾಡನ್ನಾಳಿದ ನವಾಬರಲ್ಲೆ ಅತ್ಯಂತ ಪ್ರಬಲ ಮತ್ತು ದಕ್ಷನಾಗಿದ್ದಾನೆ. ಇವನು ಸಿರಾದಲ್ಲಿ ಸುಂದರ ಅರಮನೆ ನಿರ್ಮಿಸಿದ. ಈ ಅರಮನೆ ಸೌಂದರ್ಯ ನೋಡಿದ ಹೈದರಾಲಿ, ಟಿಪ್ಪು ಪ್ರಭಾವಿತರಾಗಿ ಅದೇ ಮಾದರಿಯ ಅರಮನೆಯನ್ನು ಬೆಂಗಳೂರು ಮತ್ತು ಶ್ರೀರಂಗಪಟ್ಟಣದಲ್ಲಿ ನಿರ್ಮಿಸಿದರು.[೧೦೩] ಇದರಿಂದ ಸಿರಾಪಟ್ಟಣ ಅಂದಿನ ಸಾಮಾಜಿಕ, ಆರ್ಥಿಕ ಕ್ಷೇತ್ರದಲ್ಲಿ ಎಷ್ಟು ಮುಂದುವರೆದಿತ್ತೆಂದು ತಿಳಿಯುತ್ತದೆ.

ಕ್ರಿ.ಶ.೧೭೫೭ರಲ್ಲಿ ಸಿರಾ ಮರಾಠರ ವಶವಾಯಿತು. ನಂತರ ೧೭೬೧ರಲ್ಲಿ ಹೈದರಾಲಿ ವಶವಾಯಿತು. ಕ್ರಿ.ಶ.೧೭೭೪ರಲ್ಲಿ ಟಿಪ್ಪು ಮರಾಠರಿಂದ ಸಿರಾವನ್ನು ಗೆದ್ದನು, ನಾಲ್ಕನೇ ಮೈಸೂರು ಯುದ್ಧದಲ್ಲಿ ಟಿಪ್ಪು ಹತನಾದಾಗ ಸೀರಾ ಮೈಸೂರಿನ ಒಡೆಯರಾದ ಮುಮ್ಮಡಿ ಕೃಷ್ಣರಾಜ ಒಡೆಯರ ರಾಜ್ಯಕ್ಕೆ ಸೇರಿತು.[೧೦೪] ಎಂಬುದಾಗಿ ಎಂ.ವಿ.ವಸುರವರ ಸಂಪಾದನದ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು' ಕೃತಿಯಲ್ಲಿನ ಡಿ.ಎನ್.ಯೋಗೀಶ್ವರಪ್ಪನವರ ಲೇಖನದಿಂದ ತಿಳಿದುಬರುತ್ತದೆ.

**ಹಾಗಲವಾಡಿ ನಾಯಕರು :** ತುಮಕೂರು ಪ್ರದೇಶದಲ್ಲಿ ಆಳಿದ ಹಾಗಲವಾಡಿ ನಾಯಕರ ವಿಶೇಷತೆ ತಿಳಿಯಲು ಬಿ.ಎಲ್ .ರೈಸ್ ರವರ ಗೆಜೆಟಿಯರ್, ಶಾಸನ ಸಂಪುಟಗಳು, ಫ್ರಾನ್ಸಿಸ್ ಬುಕಾನನ್ ಪ್ರವಾಸಿ ದಾಖಲೆಗಳು ನೆರವಾಗಿವೆ. ಎಂ.ಎಸ್ .ಪುಟ್ಟಣ್ಣನವರ 'ಹಾಗಲವಾಡಿ ಪಾಳೆಗಾರರು' ಕೃತಿ ಉತ್ತಮ ವಿವರಣೆ ನೀಡಿದೆ. ಡಿ.ಎನ್.ಯೋಗೀಶ್ವರಪ್ಪರವರು ಸಂಪಾದಿಸಿರುವ 'ಹಾಗಲವಾಡಿ ನಾಯಕರು' ಕೃತಿ ಚರಿತ್ರೆ ಲೇಖನದಲ್ಲಿ ಸೈದ್ಧಾಂತಿಕ ವಿಶ್ಲೇಷಣೆಗೆ ಒಳಪಡುವುದಾಗಿದೆ.

ವಿಜಯನಗರ ಸಾಮ್ರಾಜ್ಯದ ಇತಿಹಾಸದ ಭಾಗವಾಗಿ ಮತ್ತು ಅದರ ಆಧಾರ ಸ್ತಂಭಗಳಾಗಿ ಪಾಳೆಯಗಾರರು ಅಮರ ನಾಯಕರಾಗಿ ಕಾಣಿಸಿಕೊಳ್ಳುತ್ತಾರೆ. ಇದೊಂದು ವಿಜಯನಗರ ಸೇನಾಧಿಕಾರಿಗಳ ವಿಶಿಷ್ಟ ವರ್ಗ, ರಾಜನಿಂದ ಭೂಧಾನಪಡೆದವರನ್ನು ಅಮರ ಮಾಗಣಿ, ಅರಮನಾಯಕರ್, ಅಮರ ಮಹಲೆ, ಅಮರ ಅಂಬಲಿ, ಅಮರ ಪಂದೆಯ ನಾಯಕತನ ಎಂದು ವಿವಿಧವಾಗಿ ಹೆಸರಿಸಿರುವುದು ಶಾಸನ ಸಂಪುಟಗಳಿಂದ ತಿಳಿಯುತ್ತದೆ.[೧೦೫] ಎಂ.ಎಸ್.ಪುಟ್ಟಣ್ಣನವರು ಹಾಗಲವಾಡಿ ನಾಯಕರನ್ನು ಪಾಳೆಯಗಾರರು

ಎಂದು ಕರೆದಿರುವುದು ಸರಿಯಲ್ಲ. ವಾಸ್ತವವಾಗಿ ಕರ್ನಾಟಕ ರಾಜಕೀಯ ಚೌಕಟ್ಟಿನಲ್ಲಿ ಪಾಳೆಯಗಾರ, ಪಾಳೆಯಪಟ್ಟುವಿಗೆ ಜಾಗವಿಲ್ಲ, ಸಮಕಾಲೀನ ವಿಜಯನಗರೋತ್ತರ ಶಾಸನಗಳಲ್ಲಿ ಈ ಪದದ ಉಲ್ಲೇಖನ ತುಂಬಾ ಕಡಿಮೆ. ಆದ್ದರಿಂದ ಹಾಗಲವಾಡಿ ಪಾಳೆಯಗಾರರು ಎಂದು ಕರೆಯುವುದಕ್ಕಿಂತ ಹಾಗಲವಾಡಿ ಅಮರ ನಾಯಕರು ಎಂದು ಸಂಬೋಧಿಸುವುದು ಸೂಕ್ತ ಎಂಬ ಅಭಿಪ್ರಾಯ ಡಿ.ಎನ್ .ಯೋಗೀಶ್ವರಪ್ಪರವರ ಲೇಖನದಲ್ಲಿ ವ್ಯಕ್ತವಾಗಿದೆ.

ಹಾಗಲವಾಡಿ ನಾಯಕ ವಂಶದ ಮೂಲ ಪುರುಷ ಯರಿಮಾದಿನಾಯಕ ಈ ಸಂಸ್ಥಾನದ ಸ್ಥಾಪನೆಗೆ ಮುಂಚೆ ತುಂಬಳ ಸಂಸ್ಥಾನದಲ್ಲಿ ವಿಜಯನಗರ ಸಾಮ್ರಾಜ್ಯದ ಪ್ರಾದೇಶಿಕ ಹಂತದ ಅಧಿಕಾರಿಯಾಗಿದ್ದು ನಂತರ ಚಿಕ್ಕನಾಯಕನಹಳ್ಳಿ ಪ್ರದೇಶದಲ್ಲಿ ನೆಲೆಸಿದ, ಕೊನೆಗೆ ಹಾಗಲವಾಡಿಯಲ್ಲಿ ನೆಲೆನಿಂತು ರಾಜ್ಯಾವಾಳಿದರು. ಈ ರಾಜ್ಯದ ಪೂರ್ವಕ್ಕೆ ಮದ್ದಗಿರಿ, ಕೆಂಪೇಗೌಡರ ರಾಜ್ಯ, ನೈಋತ್ಯಕ್ಕೆ ಚನ್ನಪಟ್ಟಣದ ಜಗದೇವ ರಾಯನ ರಾಜ್ಯ, ಉತ್ತರಕ್ಕೆ ಸಿರ್ಯ ಮತ್ತು ಚಿತ್ರದುರ್ಗ ರಾಜ್ಯಗಳಿದ್ದವು. ಇವುಗಳ ನಡುವೆ ಇದ್ದು ರಾಜಕೀಯ ಪಕ್ಷುಬ್ದತೆ ಕಂಡುಬಂದರೂ ಮುನ್ನೂರು ವರ್ಷ ಇಷ್ಟು ಚಿಕ್ಕ ಸಂಸ್ಥಾನ ತನ್ನ ಅಸ್ತಿತ್ವ ಉಳಿಸಿಕೊಂಡಿದ್ದು ಆಶ್ಚರ್ಯ ಸಂಗತಿ ಎಂಬುದಾಗಿ ಉಲ್ಲೇಖಿಸಲಾಗಿದೆ.[೧೦೬]

ಹಾಗವಾಡಿ ಸಂಸ್ಥಾನವು ವಿಜಯನಗರ. ವಿಜಯನಗರೋತ್ತರ ಕಾಲದಲ್ಲಿ ಸುಮಾರು ೩೦೦ ವರ್ಷಗಳವರೆಗೆ ಅಸ್ತಿತ್ವದಲ್ಲಿತ್ತು. ಈ ಅವಧಿಯಲ್ಲಿ ಅದು ತನ್ನ ಪ್ರದೇಶದ ವ್ಯಾಪ್ತಿಯಲ್ಲಿ ಬರುವ ಜನ ಜೀವನದ ಮೇಲೆ ಪ್ರಭಾವ ಬೀರಿತು. ಈ ಸಂಸ್ಥಾನದ ದೊರೆಗಳು ವಿಜಯನಗರ ಸಂಸ್ಕೃತಿಯ ಉತ್ತರಾಧಿಕಾರಿಗಳು ಅವರ ಸಾಂಸ್ಕೃತಿಕ ಮೌಲ್ಯ ಪರಂಪರೆಯನ್ನೇ ಮುಂದುವರೆಸಿಕೊಂಡು ಬಂದವರು. ಹಲವು ರಾಜಕೀಯ ಏರಿಳಿತ ಕಂಡ ಈ ಸಂಸ್ಥಾನ ಹೈದರಾಲಿಯ ಕೈವಶವಾಗಿ ಕ್ರಮೇಣ ಮೈಸೂರು ರಾಜ್ಯದಲ್ಲಿ ವಿಲೀನವಾಯಿತು.[೧೦೭]

**ಬಿಜ್ಜಾವರ ಮಹಾನಾಡ ಪ್ರಭುಗಳು :** ಕ್ರಿ.ಶ.೧೫ನೇ ಶತಮಾನದಲ್ಲಿ ವಿಜಯನಗರ ಅರಸರ ಮನ್ನಣೆಗೆ ಪಾತ್ರರಾಗಿ ಏಳಿಗೆಗೆ ಬಂದ ಮಹಾನಾಡ ಪ್ರಭುಗಳು ತಮ್ಮ ಆಳ್ವಿಕೆ ಅವಧಿಯಲ್ಲಿ ಮುಮ್ಮಡಿ ಬಿಜ್ಜಾವರ, ಮದ್ದಗಿರಿಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದರು. ಇವರ ಚರಿತ್ರೆಯ ವಿಶೇಷತೆ ತಿಳಿಯಲು ಹಲವು ವಿದ್ವಾಂಸರ ಕೃತಿಗಳು ಲೇಖನಗಳು ನೆರವಾಗಿವೆ.

ಎಂ.ಎಂ.ಕಲಬುರ್ಗಿಯವರ 'ಮಹಾನಾಡ ಪ್ರಭುಗಳು', ಕೆ.ನಾರಾಯಣಚಾರ್‌ರವರ 'ಮಧುಗಿರಿ ಚರಿತ್ರೆ', ಎಚ್.ಬಿ.ಮದೇವಪ್ಪನವರ 'ಮಧುಗಿರಿ ತಾಲ್ಲೂಕು ದರ್ಶನ', ಎಂ.ಡಿ.ಶ್ರೀನಿವಾಸ್‌ರವರ 'ಮಧುಗಿರಿ ಇತಿಹಾಸ', ಕರ್ನಲ್ ಮೆಕೆಂಜಿಯವರ 'ಮಧುಗಿರಿ ಕೈಫಿಯತ್ತು', ಕೆ.ಅಭಿಶಂಕರವರ ಸಂಪಾದನ 'ತುಮಕೂರು ಜಿಲ್ಲಾ ಗೆಜೆಟಿಯರ್', ಬಿ.ಎಲ್.ರೈಸ್‌ರ 'ಶಾಸನ ಸಂಪುಟಗಳು', ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರ 'ಸಂಪಾದನದ ಕರ್ನಾಟಕದ ಇತಿಹಾಸ ದರ್ಶನ'

ಮುಂತಾದವು ಪ್ರಮುಖವಾಗಿ ಕಂಡುಬಂದಿವೆ. ಆರ್.ಕಾವಲಮ್ಮರವರ ಸಂಪಾದಿತ 'ಮಧುಗಿರಿ ಮಹಾನಾಡ ಪ್ರಭುಗಳು' ಕೃತಿ ಸ್ಥೂಲ ವಿವರಣೆ ನೀಡುತ್ತದೆ.

ಮಧುಗಿರಿ ಮಹಾನಾಡ ಪ್ರಭುಗಳನ್ನು ಕುರಿತಂತೆ ಈವರೆಗೆ ಬಂದ ಕೃತಿಗಳು ಮತ್ತು ಲೇಖನಗಳು ಬಹಳ ಕಡಿಮೆ. ಕ್ರಿ.ಶ.೧೯೩೪ರಲ್ಲಿ ಜಯಕರ್ನಾಟಕ ಪತ್ರಿಕೆ ಸಂಚಿಕೆ ೩ರಲ್ಲಿ ಪ್ರಕಟಗೊಂಡ ಉಮಾಪತಿಯವರ 'ಮಧುಗಿರಿ ಮಹಾನಾಡ ಪ್ರಭುಗಳು' ಎಂಬ ಲೇಖನವೇ ಮೊದಲನೆಯದಾಗಿದೆ ಎಂದು ಆರ್.ಕಾವಲಮ್ಮನವರ ಸಂಪಾದನದ 'ಮಧುಗಿರಿ ಮಹಾನಾಡ ಪ್ರಭುಗಳು' ಕೃತಿಯಲ್ಲಿ ತಿಳಿಸಲಾಗಿದೆ.[೧೦೮] ಮಧುಗಿರಿ ಸುಮಾರು ೧೫ನೇಯ ಶತಮಾನದಲ್ಲಿ ಪಾಳೆಯಗಾರಿಕೆಯಾಗಿ ರೂಪಿತವಾಯಿತು. ರಾಜಾ ಹಿರೇಗೌಡನಿಂದ ಅದರ ಕೋಟೆಯೂ ಪಟ್ಟಣವೂ ನಿರ್ಮಾಣವಾಯಿತು[೧೦೯] ಎಂಬುದಾಗಿ ಎಂ.ವಿ.ಕೃಷ್ಣರಾವ್ ತಿಳಿಸಿದ್ದಾರೆ. ಮಧುಗಿರಿ ಪಾಳೆಯಗಾರ ಮೂಲ ವಂಶಾವಳಿ ಮುಮ್ಮಡಿ ಪಟ್ಟಣದಲ್ಲಿ ಆಳಿದ ಮಾರೇಗೌಡನಿಂದ ಪ್ರಾರಂಭ ಕಂಡಿತು. ಹಿರೇಚಿಕ್ಕಪ್ಪಗೌಡ ಮುಮ್ಮಡಿ ಪಟ್ಟಣದಿಂದ ಬಿಜ್ಜಾವರಕ್ಕೆ ರಾಜಧಾನಿ ಸ್ಥಳಾಂತರಿಸಿದ, ಅಲ್ಲಿ ಸುಂದರ ಬಿಜ್ಜಾಮಹಾದೇವಿ ವಿಗ್ರಹ ಪ್ರತಿಷ್ಠಾಪಿಸಿದ[೧೧೦] ಚಿಕ್ಕಪ್ಪಗೌಡ ಎಂಬ ನಾಮ ವಿಶೇಷಣ ಮಹಾನಾಡ ಪ್ರಭುಗಳಿಗೆಲ್ಲ ರೂಢಿಯಲ್ಲಿರುವುದು ಕಂಡುಬರುತ್ತದೆ. ಇವರು ವಿಜಯನಗರ ಅರಸರಿಗೆ ನಿಷ್ಠರಾಗಿಯೇ ಮುಂದುವರಿದರು. ಹಿರೇಚಿಕ್ಕಪ್ಪಗೌಡನ ನಂತರ ಕರಿತಿಮ್ಮ ಚಿಕ್ಕಪ್ಪಗೌಡ, ಇಮ್ಮಡಿ ಚಿಕ್ಕಪ್ಪ, ಚಿಕ್ಕಭೂಪಾಲ ಮುಂತಾದವರ ಆಳ್ವಿಕೆಯಲ್ಲಿ ಮುಂದುವರೆಯಿತು. ಮುಮ್ಮಡಿ ಚಿಕ್ಕಪ್ಪಗೌಡ ತಮ್ಮ ರಾಜಧಾನಿಯನ್ನು ಬಿಜ್ಜಾವರದಿಂದ ಮಧುಗಿರಿಗೆ ಬದಲಾಯಿಸಿದ. ಚಿಕ್ಕಭೂಪಾಲ ಕ್ರಿ.ಶ.೧೫೫೨ರಲ್ಲಿ ತನ್ನ ಗುರು ತೋಂಟದ ಸಿದ್ದಲಿಂಗೇಶ್ವರರ ನೆನಪಿಗೋಸ್ಕರ ಸಿದ್ದಾಪುರವೆಂಬ ಊರನ್ನು ನಿರ್ಮಿಸಿ ಅಲ್ಲಿ ಕೋಟೆ ಮತ್ತು ಪಂಚದೇವಾಲಯಗಳನ್ನು, ದೊಡ್ಡ ಕೆರೆಯನ್ನು ನಿರ್ಮಿಸಿದ[೧೧೧] ಎಂಬುದಾಗಿ ಶಾಸನ ಸಂಪುಟ ೧೨ರಲ್ಲಿ ತಿಳಿಸಲಾಗಿದೆ.

ಮಧುಗಿರಿ ಪ್ರಭುಗಳು ಕೆರೆ, ಕಾಲುವೆ, ಬಾವಿ ಮೊದಲಾದ ನೀರಾವರಿ ಮೂಲಗಳ ಸೌಕರ್ಯಕ್ಕೆ ಹೆಚ್ಚಿನ ಉತ್ತೇಜನ ನೀಡಿದರು. ಇದರಿಂದ ಕೃಷಿ ಅಭಿವೃದ್ಧಿಗೆ ಒತ್ತು ನೀಡಿದಂತಾಯಿತು. ವ್ಯಾಪಾರ ರಾಜ್ಯದ ಪ್ರಮುಖ ಚಟುವಟಿಕೆಯಾಗಿತ್ತು. ನಾಡಿನಲ್ಲಿ ವೀರಬಣಜಿಗರು ವ್ಯಾಪಾರವಹಿವಾಟು ನಡೆಸುತ್ತಿದ್ದರು. ಮಧುಗಿರಿ, ಗುಬ್ಬಿ, ಬೆಳ್ಳಾವಿ, ತಿಪಟೂರು, ತಾವರೆಕೆರೆ, ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು. ವೃತ್ತಿ ಆಧಾರಿತ ಗೃಹ ಕೈಗಾರಿಕೆ ಹೆಚ್ಚು ಬೆಳವಣಿಗೆ ಕಂಡಿತು. ಹೀಗೆ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳು ಪ್ರಭುಗಳ ಪ್ರೋತ್ಸಾಹದಿಂದ ವೃದ್ಧಿಗೊಂಡವು.

ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್', ಅ.ಸುಂದರರವರ 'ಕರ್ನಾಟಕ ಪುರಾತತ್ವ ನೆಲೆಗಳು', 'ಪ್ರಾಚ್ಯವಸ್ತು ಸಂಶೋಧನೆ'ಕೃತಿಗಳು ತುಮಕೂರು ಪ್ರದೇಶದಲ್ಲಿ ದೊರೆತ ಆದಿಮಾನವನ ನೆಲೆಗಳ ಬಗೆಗೆ ಉತ್ತಮ ಮಾಹಿತಿಯನ್ನು ನೀಡಿವೆ. ಇವರ ಪ್ರಯತ್ನಗಳಿಗಿಂತ ಮುಂಚಿನ

ಕೃತಿಗಳಲ್ಲಿ ಸಂಪೂರ್ಣವಾದ ಆದಿಮಾನವನ ನೆಲೆಗಳ ವಿವರಗಳು ಲಭ್ಯವಿಲ್ಲ ಎಂದು ಉಲ್ಲೇಖಿಸಲಾಗಿದೆ. ಈ ಪ್ರಯತ್ನದಲ್ಲಿ ಕೆ.ಬಿ.ಶಿವತಾರಕ್‌ರವರ 'ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು' ಎಂಬ ಮಹಾಪ್ರಬಂಧ ಮತ್ತು 'ಕರ್ನಾಟಕದ ಪುರಾತತ್ವ ನೆಲೆಗಳು' ಕೃತಿ ಹೆಚ್ಚಿನ ಮಹತ್ವ ಪಡೆದಿದೆ. ಸೂರ್ಯನಾಥ ಕಾಮತ್ ರವರ ಚರಿತ್ರೆ ಸಂಪುಟಗಳು, ಬಿ.ಷೇಕ ಅಲಿರವರ 'ಚರಿತ್ರೆ ಸಂಪುಟಗಳು', ಪ್ರಾಚೀನ ಚರಿತ್ರೆಯನ್ನು ವಿವರಿಸಲು ನೆರವಾಗಿವೆ. ಆದರೂ ಇವೆಲ್ಲವೂ ಶಾಸನ ಸಂಪುಟಗಳು, ಗೆಜೆಟಿಯರ್‌ಗಳನ್ನು ಅವಲಂಬಿಸಿವೆ. ತುಮಕೂರು ಪ್ರದೇಶದ ಪ್ರಾಚೀನ ಚರಿತ್ರೆಯನ್ನು ಸಮಗ್ರವಾಗಿ ವಿವರಿಸುವಂತಹ ಪ್ರಯತ್ನವನ್ನು ಯಾವ ಕೃತಿಗಳು ನಡೆಸಿಲ್ಲ ಎನ್ನುವ ಅಂಶ ಇವುಗಳ ಅವಲೋಕನದಿಂದ ಸ್ಪಷ್ಟವಾಗುತ್ತದೆ.

ತುಮಕೂರು ಪ್ರದೇಶದ ಮಧ್ಯಕಾಲೀನ ಚರಿತ್ರೆ ಹೊಯ್ಸಳರ ಆಡಳಿತ ಕಾಲದಿಂದ ಪ್ರಾರಂಭವಾಗಿದ್ದು, ಈ ಮಧ್ಯಕಾಲೀನ ಚರಿತ್ರೆಯನ್ನು ತಿಳಿಯಲು ಕೆ.ಅಭಿಶಂಕರವರ 'ತುಮಕೂರು ಜಿಲ್ಲಾ ಗೆಜೆಟಿಯರ್', ಬಿ.ಎಲ್.ರೈಸ್‌ರವರ ಶಾಸನ ಸಂಪುಟಗಳು, ಫ್ರಾನ್ಸಿಸ್ ಬುಕನನ್‌ರವರ ಪ್ರವಾಸಿ ಕಥನಗಳು, ಎಂ.ವಿ.ವಸುರವರ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು', ಸಿ.ಎನ್.ಭಾಸ್ಕರಪ್ಪನವರ ಸಂಪಾದನದ 'ತುಮಕೂರು ಜಿಲ್ಲಾ ದರ್ಶನ', ಡಿ.ಎನ್.ಯೋಗೀಶ್‌ರವರ ಸಂಪಾದನದ 'ಜಯಮಂಗಲಿ' ಸ್ಮರಣ ಸಂಚಿಕೆ ಹಾಗೂ ತಾಲ್ಲೂಕು ದರ್ಶನಗಳು ಮುಂತಾದವು ನೆರವಾಗಿವೆ. ಚೋಳರ ಅದಿಪತ್ಯ ಅಳಿಸಿ ಕನ್ನಡ ನಾಡಿನ ಪರಮಾಧಿಕಾರ ತುಮಕೂರು ಪ್ರದೇಶದಲ್ಲಿ ಹೊಯ್ಸಳರಿಂದ ನೆಲೆಗೊಂಡಿರುವುದು ತಿಳಿದುಬರುತ್ತದೆ. ವಿಜಯನಗರ ಅರಸರ ಅಧೀನಕ್ಕೂ ಈ ಪ್ರದೇಶ ಒಳಪಟ್ಟಿರುವುದನ್ನು ಗೆಜೆಟಿಯರ್‌ಗಳು ಮತ್ತು ಶಾಸನ ಸಂಪುಟಗಳು ವಿವರಿಸಿವೆ. ವಿಜಯನಗರ ಸಾಮ್ರಾಜ್ಯದ ಕುರಿತಾಗಿ ರಚನೆಗೊಂಡಿರುವ ರಾಬರ್ಟ್‌ಸಿವೆಲ್‌ರ 'ಮರೆತು ಹೋದ ಮಹಾಸಾಮ್ರಾಜ್ಯ' ಹಾಗೂ ಸೂರ್ಯನಾರಾಯಣರಾವ್‌ರವರ 'ಮರೆಯಲಾಗದ ಸಾಮ್ರಾಜ್ಯ' ಎಂಬ ಗ್ರಂಥಗಳು ಪ್ರಮುಖವಾಗಿದ್ದು, ಇವೆರಡು ವಿಭಿನ್ನಾಭಿಪ್ರಾಯ ಹೊಂದಿವೆ. ಸಿವೆಲ್ಲರದು ಹಿಂದು-ಮುಸ್ಲಿಂ ನಡುವೆ ಒಡಕುಂಟು ಮಾಡುವುದಕ್ಕಾಗಿಯೇ ರಚನೆಯಾದಂತಿದೆ ಎಂಬ ವಾದಕ್ಕೆ ಸಿಲುಕಿದೆ. ಸೂರ್ಯನಾರಾಯಣರಾವ್ ರವರು ರಾಷ್ಟ್ರೀಯತೆಯ ಭಾವನೆಯನ್ನು ಉಂಟುಮಾಡಿದ್ದಾರೆ. ಈ ಹಿನ್ನಲೆಯಲ್ಲಿ ಅವರ ರಾಷ್ಟ್ರೀಯ ಭಾವನೆ ತಿಳಿಸಬೇಕೆಂಬ ಹಂಬಲ ವಿಜಯನಗರ ಚರಿತ್ರೆಯಲ್ಲಿ ಕೋಮುಭಾವನೆ ಉಂಟಾಗುವಂತಾಯಿತು ಎಂಬ ಆರೋಪಕ್ಕೆ ಸಿಲುಕಿದೆ.

ವಿಜಯನಗರ ಸಾಮ್ರಾಜ್ಯದ ನೆರವಿಗೆ ನಿಂತಿದ್ದ ಸಾಮಂತರು ಪಾಳೆಯಗಾರರು, ಮೊಗಲರು ಹಾಗೂ ಮರಾಠರೊಂದಿಗೆ ಸೆಣಸಾಟ, ಸ್ವಾತಂತ್ರ್ಯತೆಯನ್ನು ವ್ಯಕ್ತಪಡಿಸಿರುವುದು ಎಂ.ವಿ.ಕೇಶವಭಟ್ಟರ 'ಕರ್ನಾಟ ಇತಿಹಾಸ ದರ್ಶನ', ಎಂ.ವಿ.ವಸುರವರ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು', ಆರ್.ಕಾವಲಮ್ಮನವರ 'ಮಧುಗಿರಿ ಮಹಾನಾಡ ಪ್ರಭುಗಳು', ಎಂ.ಎಂ.ಕಲ್ಬುರ್ಗಿಯವರ 'ಮಹಾನಾಡ ಪ್ರಭುಗಳು', ಡಿ.ಎನ್.ಯೋಗೀಶ್ವರಪ್ಪನವರ 'ಹಾಗಲವಾಡಿ ನಾಯಕರು', ಲಕ್ಷ್ಮಣ್ ತೆಲಗಾವಿಯವರ

'ಹರತಿಸಿರಿ' ಮುಂತಾದವುಗಳಿಂದ ತಿಳಿಯುತ್ತದೆ. ನಿಡಗಲ್ಲು, ಪಾವಗಡ, ಸಿರಾ, ಹಾಗಲವಾಡಿ, ಗುಬ್ಬಿ ಹೊಸಹಳ್ಳಿ, ಬಿಜ್ಜಾವರ ಪಾಳೆಯಗಾರರು ತಮ್ಮ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಮೊಗಲರು ಮರಾಠರು, ಹೈದಾರಲಿ, ಟಿಪ್ಪು ವಿರುದ್ಧ ಹೋರಾಟ ನಡೆಸುವುದರ ಜೊತೆಗೆ ಆಂಗ್ಲರು ಸೇರಿ ಸ್ವಾಯತ್ತತೆ ಉಳಿಸಿಕೊಳ್ಳಲು ಅವಿರತ ಹೋರಾಟ ನಡೆಸಿರುವುದು ಈ ಕೃತಿಗಳ ಅವಲೋಕನದಿಂದ ವ್ಯಕ್ತವಾಗುತ್ತದೆ.

**ಅಡಿಟಿಪ್ಪಣಿಗಳು**

೧. ಸುಂದರ ಅ., **ಪ್ರಾಚ್ಯ ವಸ್ತು ಸಂಶೋಧನೆ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೭೩, ಪು.೧೧

೨. ಷೇಕ್ ಅಲಿ ಬಿ., **ಕರ್ನಾಟಕ ಚರಿತ್ರೆ ಸಂಪುಟ-೧,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭, ಪು.೬೯

೩. ಶಿವತಾರಕ್ ಕೆ.ಬಿ., **ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು, ಅಪ್ರಕಟಿತ ಪಿಎಚ್.ಡಿ.**ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೯, ಪು.೫

೪. ಗೋಪಾಲ್ ಆರ್.(ಸಂ), **ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ ೨೦೦೪, ಪು.೧೭

೫. ದಿವಾಕರ ಆರ್.ಆರ್., **ಕರ್ನಾಟಕ ಪರಂಪರೆ, ಸಂಪುಟ-೧,** ಸಾಹಿತ್ಯ ಸಂಸ್ಕೃತಿ ಇಲಾಖೆ, ಮೈಸೂರು, ೧೯೭೦, ಪು.೧೦

೬. ಷೇಕ್ ಅಲಿ ಬಿ.(ಪ್ರ.ಸಂ), **ಕರ್ನಾಟಕ ಚರಿತ್ರೆ** ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, ೧೯೯೩, ಪು. ೬೯

೭. ಶಿವತಾರಕ್ ಕೆ.ಬಿ, **ಪೂರ್ವೋಕ್ತ,** ೧೯೯೯, ಪು.೧೪, ೧೫

೮. ಷೇಕ್ ಅಲಿ ಬಿ., **ಪೂರ್ವೋಕ್ತ** ೧೯೯೭, ಪು.೭

೯. ಯೋಗೀಶ್, **ಜಯಮಂಗಲಿ ಸ್ಮರಣ ಸಂಚಿಕೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨, ಪು.೧೧

೧೦. ಷೇಕ್ ಅಲಿ ಬಿ., **ಪೂರ್ವೋಕ್ತ,** ೧೯೯೭, ಪು.೧೦೯

೧೧. ಶರ್ಮ ಆರ್.ಎಸ್., **ಪ್ರಾಚೀನ ಭಾರತ** (ಅನು) ಶಂಕರ ನಾಯರಾಯಣರಾವ್, ನವ ಕರ್ನಾಟಕ ಪ್ರಕಾಶನ, ಬೆಂಗಳೂರು ೧೯೯೭, ಪು.೩೯

೧೨. ಶಿವತಾರಕ್ ಕೆ.ಬಿ, **ಕರ್ನಾಟಕ ಪುರಾತತ್ವ ನೆಲೆಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ಪು.೧೨

೧೩. ಯೋಗೀಶ್ ಡಿ.ಎನ್., **ಪೂರ್ವೋಕ್ತ,** ೨೦೦೨, ಪು.೧೪

೧೪. ಅದೇ, ಪು.೧೪, ೧೫

೧೫. ದಿವಾಕರ ಆರ್.ಆರ್., **ಪೂರ್ವೋಕ್ತ,** ೧೯೭೦, ಪು.೧೦೭

೧೬. ಕೃಷ್ಣಮೂರ್ತಿ.ಪಿ.ವಿ ಮತ್ತು ವಸಂತಲಕ್ಷ್ಮಿ ಕೆ.(ಸಂ), **ಸೂರ್ಯಕೀರ್ತಿ, ಸೂರ್ಯನಾಥ ಕಾಮತ್ ಅಭಿನಂದನಾ ಗ್ರಂಥ,** ಬೆಂಗಳೂರು ೨೦೦೦, ಪು.೨೪

೧೭. ಷೇಕ್ ಅಲಿ ಬಿ., **ಪೂರ್ವೋಕ್ತ**, ೧೯೯೭, ಪು.೧೨೪

೧೮. ಶಿವತಾರಕ್ ಕೆ.ಬಿ., **ಪೂರ್ವೋಕ್ತ**, ೧೯೯೯, ಪು.೧೦

೧೯. ಯೋಗೀಶ್ ಡಿ.ಎನ್., **ಪೂರ್ವೋಕ್ತ**, ೨೦೦೨, ಪು.೧೩, ೧೪

೨೦. ನಾಯಕ ಹಾ.ಮಾ., **ಕನ್ನಡ ವಿಶ್ವಕೋಶ**, ಸಂಪುಟ-೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ೧೯೭೨, ಪು.೪೨೮

೨೧. ಶಿವತಾರಕ್ ಕೆ.ಬಿ., **ಪೂರ್ವೋಕ್ತ**, ೧೯೯೯, ಪು.೪೦೭

೨೨. ಕೃಷ್ಣಮೂರ್ತಿ ಪಿ.ವಿ ಮತ್ತು ವಸಂತಲಕ್ಷ್ಮಿ ಕೆ., **ಪೂರ್ವೋಕ್ತ**, ೨೦೦೦, ಪು.೨೪

೨೩. ದಿವಾಕರ ಆರ್.ಆರ್.,(ಸಂ) **ಪೂರ್ವೋಕ್ತ**, ೧೯೭೦, ಪು.೧೧೯

೨೪. ಶಿವತಾರಕ್ ಕೆ.ಬಿ., **ಪೂರ್ವೋಕ್ತ**, ೧೯೯೯, ಪು.೪೩೧, ೪೩೨

೨೫. ಯೋಗೀಶ್ ಡಿ.ಎನ್., **ಪೂರ್ವೋಕ್ತ**, ೨೦೦೨, ಪು.೧೪, ೧೫

೨೬. ಭಾಸ್ಕರಪ್ಪ ಸಿ.ಎನ್., **ತುಮಕೂರು ಜಿಲ್ಲಾ ದರ್ಶನ**, ಟೈಮ್ಸ್ ಪಬ್ಲಿಕೇಷನ್ಸ್, ತುಮಕೂರು ೧೯೮೧, ಪು.೨೭

೨೭. ಯೋಗೀಶ್ ಡಿ.ಎನ್.,(ಸಂ) **ಪೂರ್ವೋಕ್ತ**, ೨೦೦೨, ಪು.೧೮

೨೮. ಅಭಿಶಂಕ ಕೆ., **ತುಮಕೂರು ಜಿಲ್ಲಾ ಗೆಜೆಟಿಯರ್**, ಸರ್ಕಾರಿ ಮುದ್ರಣ, ಬೆಂಗಳೂರು ೧೯೬೯, ಪು.೨೮

೨೯. ಕೃಷ್ಣರಾವ್ ಎಂ.ವಿ., ಮತ್ತು ಕೇಶವಭಟ್ಟ ಎಂ., **ಕರ್ನಾಟಕ ಇತಿಹಾಸ ದರ್ಶನ**, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು ೧೯೭೦, ಪು.೩೭, ೩೮

೩೦. ನಂಜುಂಡ ಸ್ವಾಮಿ ಎಂ.ಎಸ್.,(ಲೇ) **ಕದಂಬ-ಗಂಗರ ಇತಿಹಾಸ**, ಸಮಾಜ ಪುಸ್ತಕಾಲಯ, ಧಾರವಾಡ ೨೦೦೪, ಪು.೭೪

೩೧. ಭಾಸ್ಕರಪ್ಪ ಸಿ.ಎನ್.,(ಸಂ) **ಪೂರ್ವೋಕ್ತ**, ೧೯೮೧, ಪು.೨೮

೩೨. ಯೋಗೀಶ್ ಡಿ.ಎನ್.(ಸಂ) **ಪೂರ್ವೋಕ್ತ**, ೨೦೦೨, ಪು.೨೮

೩೩. ಷೇಕ್ ಅಲಿ ಬಿ.(ಪ್ರ.ಸಂ), **ಪೂರ್ವೋಕ್ತ**, ೧೯೯೭, ಪು.೪೦

೩೪. ಅಭಿಶಂಕರ ಕೆ., **ಪೂರ್ವೋಕ್ತ**, ೧೯೬೯, ಪು.೪೪

೩೫. ಕೃಷ್ಣರಾವ್ ಎಂ.ವಿ., ಮತ್ತು ಕೇಶವಭಟ್ಟ ಎಂ., **ಪೂರ್ವೋಕ್ತ**, ೧೯೭೦, ಪು.೫೨, ೫೩

೩೬. ಕಲಬುರ್ಗಿ ಎಂ.ಎಂ., **ಪ್ರಾಚೀನ ಕರ್ನಾಟಕ ಆಡಳಿತ ವಿಭಾಗಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೪೮

೩೭. ದೇವರಕೊಂಡಾ ರೆಡ್ಡಿ, **ತಲಕಾಡಿನ ಗಂಗರ ದೇವಾಲಯಗಳು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೪, ಪು.೧೨೫, ೧೨೭, ೧೪೧, ೧೬೬, ೨೧೬

೩೮. ಗೋಪಾಲ ಬಾ.ರಾ., **ಕರ್ನಾಟಕ ಇತಿಹಾಸ**, ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೬, ಪು.೧೫೧

೩೯. ಯೋಗೀಶ್ ಡಿ.ಎನ್(ಸಂ), **ಪೂರ್ವೋಕ್ತ**, ೨೦೦೨, ಪು.೧೮

೪೦. ಭಾಸ್ಕರಪ್ಪ.ಸಿ.ಎನ್(ಸಂ), **ಪೂರ್ವೋಕ್ತ**, ೧೯೮೧, ಪು.೨೮, ೨೯

೪೧. ಯೋಗೀಶ್ ಡಿ.ಎನ್(ಸಂ), **ಪೂರ್ವೋಕ್ತ**, ೨೦೦೨, ಪು.೧೮

೪೨. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ.ಎಂ(ಸಂ) **ಪೂರ್ವೋಕ್ತ**, ೧೯೭೦, ಪು.೯೮

೪೩. ಷೇಕ್ ಅಲಿ.ಬಿ, (ಸಂ) **ಪೂರ್ವೋಕ್ತ**, ೧೯೯೭, ಪು.೪೦

೪೪. ಕಲಬುರ್ಗಿ ಎಂ.ಎಂ., **ಪೂರ್ವೋಕ್ತ**, ೧೯೯೭, ಪು.೪೯

೪೫. ಭಾಸ್ಕರಪ್ಪ ಸಿ.ಎನ್.,(ಸಂ) **ಪೂರ್ವೋಕ್ತ**, ೧೯೮೧, ಪು.೩೦

೪೬. ಯೋಗೀಶ್ ಡಿ.ಎನ್(ಸಂ), **ಪೂರ್ವೋಕ್ತ**, ೨೦೦೨, ಪು.೧೯

೪೭. ಷೇಕ್ ಅಲಿ.ಬಿ, (ಸಂ) **ಪೂರ್ವೋಕ್ತ**, ೧೯೯೭, ಪು.೪೦

೪೮. ಸೂರ್ಯನಾಥ ಕಾಮತ್ ಮತ್ತು ಕೃಷ್ಣಮೂರ್ತಿ, ಪಿ.ವಿ(ಸಂ), **ಇತಿಹಾಸದರ್ಶನ, ಸಂಪುಟ** ೧೧, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು ೧೯೯೬, ಪು.೨೦೭

೪೯. ಚಂದ್ರಶೇಖರಪ್ಪ ಟಿ.ಜಿ.(ಸಂ), **ಭಾರತದ ಇತಿಹಾಸ**, ಪೂರ್ಣ ಪ್ರಕಾಶನ, ಶಿವಮೊಗ್ಗ ೨೦೦೨, ಪು.೧೯

೫೦. ಯೋಗೀಶ್ ಡಿ.ಎನ್(ಸಂ), **ಪೂರ್ವೋಕ್ತ**, ೨೦೦೨, ಪು.೧೯

೫೧. ವಸು ಎಂ.ವಿ.(ಸಂ), **ದಕ್ಷಿಣ ಕರ್ನಾಟಕದ ಅರಸು ಮನೆತನಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ ೨೦೦೧, ಪು.೧

೫೨. ಭಾಸ್ಕರಪ್ಪ ಸಿ.ಎನ್., **ಪೂರ್ವೋಕ್ತ**, ೧೯೮೧, ಪು.೩೦

೫೩. ಅದೇ, ಪು.೩೧

೫೪. ಯೋಗೀಶ್ ಡಿ.ಎನ್(ಸಂ), **ಪೂರ್ವೋಕ್ತ**, ೨೦೦೨, ಪು.೨೦

೫೫. ವಸು.ಎಂ.ವಿ(ಸಂ), **ಪೂರ್ವೋಕ್ತ**, ೨೦೦೧, ಪು.೪

೫೬. ಅದೇ, ಪು.೧

೫೭. ಗೋಪಾಲ್ ಆರ್.,(ಸಂ) ಜಯಮ್ಮ ಕರಿಯಣ್ಣ (ಲೇ), **ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೪, ಪು.೪

೫೮. ಭಾಸ್ಕರಪ್ಪ ಸಿ.ಎನ್(ಸಂ), **ಪೂರ್ವೋಕ್ತ**, ೧೯೮೧, ಪು.೩೨

೫೯. ಯೋಗೀಶ್ ಡಿ.ಎನ್(ಸಂ), **ಪೂರ್ವೋಕ್ತ**, ೨೦೦೨, ಪು.೨೦

೬೦. ಭಾಸ್ಕರಪ್ಪ ಸಿ.ಎನ್.(ಸಂ), **ಪೂರ್ವೋಕ್ತ**, ೧೯೮೧, ಪು.೩೩

೬೧. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ.,(ಸಂ) **ಪೂರ್ವೋಕ್ತ**, ೧೯೭೦, ಪು.೨೧೫

೬೨. ವಸು.ಎಂ.ವಿ (ಸಂ), **ಪೂರ್ವೋಕ್ತ**, ೨೦೦೧, ಪು.೧೪

೬೩. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ.ಎಂ, (ಸಂ) **ಪೂರ್ವೋಕ್ತ**, ೧೯೭೦, ಪು.೨೧೫

೬೪. ವಸು ಎಂ.ವಿ.,(ಲೇ) **ಪೂರ್ವೋಕ್ತ**, ೨೦೦೨, ಪು.೧೫

೬೫. ಅದೇ, ಪು.೧೫, ೧೮, ೨೦

೬೬. ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಭಟ್ಟ (ಸಂ), **ಪೂರ್ವೋಕ್ತ**, ೧೯೭೦, ಪು.೨೧೬

೬೭. ಗೋಪಾಲ ಬಾ.ರಾ., ಪೂರ್ವೋಕ್ತ, ೧೯೮೬, ಪು.೨೬೧

೬೮. ರೈಸ್ ಬಿ.ಎಲ್., **ಎಫಿಗ್ರಾಫಿಯಾ ಕರ್ನಾಟಕ** Xii, ತುಮಕೂರು, ೧೯೦೪, ಪು.೯

೬೯. ಕೃಷ್ಣರಾವ್ ಎಂ.ವಿ., ಮತ್ತು ಕೇಶವಭಟ್ಟ ಎಂ., **ಪೂರ್ವೋಕ್ತ**, ೧೯೭೦, ಪು.೨೧೮, ೨೧೯

೭೦. ಅಭಿಶಂಕರ ಕೆ., **ಪೂರ್ವೋಕ್ತ**, ೧೯೭೯, ಪು.೨೧

೭೧. ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಭಟ್ಟ ಎಂ., **ಪೂರ್ವೋಕ್ತ**, ೧೯೭೦, ಪು.೨೨೭

೭೨. ಯೋಗೀಶ್ ಡಿ.ಎನ್., ಮರುಗೆರೆ ನಾಡಿನ ಹೊಯ್ಸಳ ವಿಷ್ಣುವರ್ಧನ "ಸಾಮಂತ ಗೂಳಿ ಬಾಚಿದೇವ" (ಲೇಖನ)

೭೩ ಭಾಸ್ಕರಪ್ಪ ಸಿ.ಎನ್(ಸಂ), **ಪೂರ್ವೋಕ್ತ**, ೧೯೮೦, ಪು.೩೬

೭೪. ಯೋಗೀಶ್ವರಪ್ಪ ಡಿ.ಎನ್., **"ಹೊಯ್ಸಳ ಶ್ರೀ ಮನ್ಮಹಾಪ್ರಧಾನ ಸೆಟ್ಟಿಕೆರೆಯ ಗೋಪಾಲ ದಣ್ಣಾಯಕ"** (ಲೇಖನ)

೭೫. ಮಹದೇವ ಸಿ. ಮತ್ತು ಚಿನ್ನಸ್ವಾಮಿ ಸೋಸಲೆ(ಸಂ), **ಹಂಪಿ ಅಂದು - ಇಂದು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.೩೩

೭೬. ಸೂರ್ಯನಾಥ ಕಾಮತ್, ವಿಜಯನಗರ ಸಾಮ್ರಾಜ್ಯ, ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೮೫, ಪು.೪-೫

೭೭. ಮಹದೇವ ಸಿ. ಮತ್ತು ಚಿನ್ನಸ್ವಾಮಿ ಸೋಸಲೆ(ಸಂ), **ಪೂರ್ವೋಕ್ತ**, ೨೦೦೬, ಪು.೩೪

೭೮. ಕೃಷ್ಣರಾವ್ ಎಂ.ವಿ ಮತ್ತು ಕೇಶವ ಭಟ್ಟ ಎಂ.(ಸಂ), **ಪೂರ್ವೋಕ್ತ**, ೧೯೭೦, ಪು.೩೬೦

೭೯. ಯೋಗಿಶ್ ಡಿ.ಎನ್.(ಸಂ) **ಜಯಮಂಗಲಿ ಸ್ಮರಣ ಸಂಚಿಕೆ**, ೨೦೦೨, ಪು.೨೩

೮೦. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ., **ಕರ್ನಾಟಕ ಇತಿಹಾಸ ದರ್ಶನ**, ೧೯೭೦, ಪು.೩೭೭

೮೧. ಯೋಗೀಶ್ ಡಿ.ಎನ್(ಸಂ), **ಪೂರ್ವೋಕ್ತ**, ೨೦೦೨, ಪು.೨೩

೮೨. ರೈಸ್ ಬಿ.ಎಲ್., **ಮೈಸೂರು ಗೆಜೆಟಿಯರ್**, ಸಂಪುಟ-೨, ಏಷ್ಯನ್ ಎಜುಕೇಷನಲ್ ಸರ್ವೀಸ್, ನವದೆಹಲಿ, ಮದ್ರಾಸ್ ೨೦೦೧, ಪು.೧೬೬

೮೩. ಕೃಷ್ಣರಾವ್ ಎಂ.ವಿ., ಮತ್ತು ಕೇಶವಭಟ್ಟ, **ಪೂರ್ವೋಕ್ತ**, ೧೯೭೦, ಪು.೫೨೧

೮೪. ಪುಟ್ಟಣ್ಣ ಎಂ.ಎಸ್., **ಚಿತ್ರದುರ್ಗದ ಪಾಳೆಯಗಾರರು**, ಕಾವ್ಯಾಲಯ ಪ್ರಕಾಶನ, ಮೈಸೂರು ೧೯೯೭, ಪು.೫೩

೮೫. ಸೂರ್ಯನಾಥ ಕಾಮತ್(ಸಂ) ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾಡಮಿ, ಬೆಂಗಳೂರು ೧೯೯೫, ಪು.೪೮೮

೮೬. ಅಭಿಶಂಕರ ಕೆ., **ಪೂರ್ವೋಕ್ತ**, ೧೯೭೯, ಪು.೪೨

೮೭. ಅದೇ, ಪು.೪೨, ೪೩

೮೮. ಯೋಗೀಶ್ ಡಿ.ಎನ್(ಸಂ), **ಪೂರ್ವೋಕ್ತ**, ೨೦೦೨, ಪು.೨೩

೮೯. ಪರಮಶಿವಮೂರ್ತಿ ಡಿ.ವಿ., **ಸಂಶೋಧನೆಯ ಸಿರಿ**, ಗುಣನಿಧಿ ಪ್ರಕಾಶನ, ಬೆಂಗಳೂರು ೧೯೯೬, ಪು.೩

೯೦. ವಸು.ಎಂ.ವಿ (ಸಂ), **ಪೂರ್ವೋಕ್ತ**, ೨೦೦೧, ಪು.೫೦

೯೧. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ.,(ಸಂ) **ಪೂರ್ವೋಕ್ತ**, ೧೯೭೦, ಪು.೪೭೨

೯೨. ವಸು.ಎಂ.ವಿ (ಸಂ), **ಪೂರ್ವೋಕ್ತ**, ೨೦೦೧, ಪು.೫೨, ೫೩

೯೩. ಕೃಷ್ಣರಾವ್ ಎಂ.ವಿ., ಮತ್ತು ಕೇಶವಭಟ್ಟ ಎಂ., **ಪೂರ್ವೋಕ್ತ**, ೧೯೭೦, ಪು.೬೨

೯೪. ವಸು.ಎಂ.ವಿ (ಸಂ), **ಪೂರ್ವೋಕ್ತ**, ೨೦೦೧, ಪು.೬೨

೯೫. ರೈಸ್ ಬಿ.ಎಲ್., **ಮೈಸೂರು ಗೆಜೆಟಿಯರ್**, ಸಂಪುಟ ೨, ಮೈಸೂರು ಸರ್ಕಾರ, ಮೈಸೂರು, ೧೮೯೭, ಪು.೧೯೫

೯೬. ನಾಯಕ ಹಾ.ಮಾ., **ವಿಶ್ವಕೋಶ**, ಸಂಪುಟ ೯, ಕ.ಅ.ಸ. ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೭, ಪು.೩೩೦

೯೭. **ಎಪಿಗ್ರಾಫಿಯಾ ಕರ್ನಾಟಕ**, ಸಂಪುಟ-೧೨, ೧೯೦೪, ಹಿರಿಯೂರು ೬

೯೮. ವಸು.ಎಂ.ವಿ (ಸಂ), **ಪೂರ್ವೋಕ್ತ**, ೨೦೦೧, ಪು.೧೮೬

೯೯. ಅಭಿಶಂಕರ ಕೆ., **ಪೂರ್ವೋಕ್ತ**, ೧೯೭೯, ಪು.೪೧

೧೦೦. ರೈಸ್ ಬಿ.ಎಲ್., **ಪೂರ್ವೋಕ್ತ**, ೧೮೯೭, ಪು.೨೭

೧೦೧. ಪುಟ್ಟಣ್ಣ ಎಂ.ಎಸ್., **ಚಿತ್ರದುರ್ಗದ ಪಾಳೆಯಗಾರರು**, ಕಾವ್ಯಾಲಯ ಪ್ರಕಾಶನ, ಮೈಸೂರು ೧೯೯೭, ಪು.೫೩

೧೦೨. ನಾಯಕ ಹಾ.ಮಾ.(ಸಂ), **ಕನ್ನಡ ವಿಷಯ ವಿಶ್ವಕೋಶ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೯, ಪು.೧೪೧೦

೧೦೩. ರೈಸ್ ಬಿ.ಎಲ್., **ಪೂರ್ವೋಕ್ತ**, ೧೮೯೭, ಪು.೧೯೯

೧೦೪. ವಸು.ಎಂ.ವಿ (ಸಂ), **ಪೂರ್ವೋಕ್ತ**, ೨೦೦೧, ಪು.೨೦೦

೧೦೫. ಯೋಗೀಶ್ವರಪ್ಪ ಡಿ.ಎನ್.(ಸಂ) **ಹಾಗಲವಾಡಿ ನಾಯಕರು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೯, ಪು.೨೯

೧೦೬. ಪುಟ್ಟಣ್ಣ ಎಂ.ಎಸ್., **ಹಾಗಲವಾಡಿಯ ಪಾಳೆಯಗಾರರು**, ಬೆಂಗಳೂರು, ೧೯೩೧, ಪು.೫

೧೦೭. ಯೋಗೀಶ್ವರಪ್ಪ ಡಿ.ಎನ್.(ಸಂ), **ಹಾಗಲವಾಡಿ ನಾಯಕರು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪು.೪೫

೧೦೮. ಕಾವಲಮ್ಮ ಆರ್., **ಮಧುಗಿರಿ ಮಹಾನಾಡ ಪ್ರಭುಗಳು**, ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ, ೨೦೦೫, ಪು.೧೭

೧೦೯. ಕೃಷ್ಣರಾವ್ ಎಂ.ವಿ., ಮತ್ತು ಕೇಶವಭಟ್ಟ ಎಂ.,(ಸಂ) **ಪೂರ್ವೋಕ್ತ**, ೧೯೭೦, ಪು.೪೭೨

೧೧೦. ನಾರಾಯಣಚಾರ್ ಕೆ., **ಮಧುಗಿರಿ ಚರಿತ್ರೆ**, ವಿ.ಬಿ.ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು ೧೯೪೫, ಪು.೧೪

೧೧೧. ವಸು.ಎಂ.ವಿ (ಸಂ), **ಪೂರ್ವೋಕ್ತ**, ೨೦೦೧, ಪು.೨೩೮

೩

# ವಸಾಹತು ಕಾಲದ ಚಾರಿತ್ರಿಕ ಕೃತಿಗಳ ಅವಲೋಕನ

ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದಲ್ಲಿ ಚರಿತ್ರೆ ಬರವಣಿಗೆಯಲ್ಲಿ ಹಲವು ಪಂಥಗಳು ಹುಟ್ಟಿಕೊಂಡವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ವಸಾಹತುಶಾಹಿ ಪಂಥ, ರಾಷ್ಟ್ರೀಯವಾದಿ ಪಂಥ, ಮಾರ್ಕ್ಸ್‌ವಾದಿ ಪಂಥ ಹಾಗೂ ಸಬಾಲ್ಟರ್ನ್ ಪಂಥ. ಈ ಪಂಥಗಳ ಸಿದ್ಧಾಂತಗಳು ಮೇಲ್ನೋಟಕ್ಕೆ ಭಾರತದ ಚರಿತ್ರೆಗೆ ಸಂಬಂಧಿಸಿದಂತೆ ಕಂಡುಬಂದರೂ ಕರ್ನಾಟಕ ಚರಿತ್ರೆ ಇವುಗಳಿಂದ ನೇರವಾಗಿ ಪ್ರಭಾವಿತವಾಗಿದೆ. ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಹುಟ್ಟಿಕೊಂಡ ಒರಿಯಂಟಾಲಿಸ್ಟ್ ಪಂಥವು ಭಾರತದ ಪ್ರಾಚೀನ ಚರಿತ್ರೆಯನ್ನು ವಸ್ತುವನ್ನಾಗಿ ಆಯ್ಕೆಮಾಡಿಕೊಂಡಿತು. ಈ ಪಂಥದ ಪ್ರಮುಖರೆಂದರೆ ಸರ್ ವಿಲಿಯಂ ಜೋನ್ಸ್, ಎಫ್.ಮ್ಯಾಕ್ಸ್ ಮುಲ್ಲರ್, ಅಲೆಗ್ಸಾಂಡರ್ ಕನ್ನಿಂಗ್‌ಹಾಮ್ ಇತ್ಯಾದಿ ಪೌರ್ವಾತ್ಯವಾದಿಗಳು ಭಾರತವನ್ನು ಅಧ್ಯಾತ್ಮಿಕ, ಅಲೌಕಿಕ ಚಿಂತನೆಗಳಿಂದ ಕೂಡಿದ ದೇಶ, ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲ ಎಂಬ ತೀರ್ಮಾನ ತೆಗೆದುಕೊಂಡರು.

ವಿನ್‌ಸೆಂಟ್ ಸ್ಮಿತ್, ಜೇಮ್ಸ್‌ಮಿಲ್, ಲೇನ್‌ಪೂಲ್, ಮಾರ್ಕ್ಸ್‌ವಿಲ್ಕ್ಸ್ ಮುಂತಾದ ಸಾಮ್ರಾಜ್ಯಶಾಹಿ ಚರಿತ್ರೆಕಾರರು ಭಾರತೀಯರು ಸ್ವಯಂಮಾಡಳಿತವನ್ನು ಎತ್ತಿ ಹಿಡಿಯುವ ಅಥವಾ ಅದನ್ನು ಬಲಪಡಿಸುವ ಕೆಲಸ ಮಾಡಿದರು. ಭಾರತದ ಚರಿತ್ರೆಯನ್ನು ಹಿಂದೂ, ಮುಸ್ಲಿಮ್, ಕ್ರಿಶ್ಚಿಯನ್ ಎಂಬುದಾಗಿ ವಿಂಗಡಣೆ ಮಾಡಿ ಕೋಮುವಾದಿ ಭಾವನೆ ಮೂಡುವಂತೆ ಮಾಡಿದರು.

ರಾಷ್ಟ್ರೀಯವಾದಿ ಪಂಥವು ಓರಿಯಂಟಾಲಿಸ್ಟ್ ಮತ್ತು ಸಾಮ್ರಾಜ್ಯಶಾಹಿ ಚರಿತ್ರೆಕಾರರನ್ನು ವಿರೋಧಿಸುವ ನೆಪದಲ್ಲಿ ಅವರ ಹಲವಾರು ಅಭಿಪ್ರಾಯಗಳನ್ನು ತನ್ನ ಸಿದ್ಧಾಂತದೊಳಗೆ ಸೇರಿಸಿಕೊಂಡಿತು. ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಎನ್ನುವ ವರ್ಗೀಕರಣವನ್ನು ರಾಷ್ಟ್ರೀಯವಾದಿ ಚರಿತ್ರೆಕಾರರು ಒಪ್ಪಿಕೊಂಡು ಚರಿತ್ರೆ ನಿರ್ಮಿಸಿದರು. ಇಂತಹ ರಾಷ್ಟ್ರೀಯವಾದಿ ಚರಿತ್ರೆಕಾರರೆಂದರೆ ಆರ್.ಸಿ.ಮಜುಮ್‌ದಾರ್, ಹೇಮಚಂದ್ರರಾಯ್ ಚೌಧರಿ, ಆರ್.ಜಿ.ಭಂಡಾರ್‌ಕರ್, ಕೆ.ಪಿ.ಜಯಸ್ವಾಲ್, ಕೆ.ಎ.ನೀಲಕಂಠಶಾಸ್ತ್ರಿ, ಎಸ್.ಆಲ್ಟೇಕರ್ ಮುಂತಾದವರು. ಕೆ.ಎ.ನೀಲಕಂಠಶಾಸ್ತ್ರಿ ಮತ್ತು ಎ.ಎಸ್.ಆಲ್ಟೇಕರ್‌ರವರು ದಕ್ಷಿಣ ಭಾರತದ ಚರಿತ್ರೆ ರಚನೆಯಲ್ಲಿ ತೊಡಗಿದರು.[೧] ಸೂರ್ಯನಾಥ ಕಾಮತ್, ಎಂ.ವಿ.ಕೃಷ್ಣರಾವ್, ಎಂ. ಕೇಶವಭಟ್ಟ, ಎಂ.ಎಚ್.ಕೃಷ್ಣ ಮುಂತಾದವರು ಕರ್ನಾಟಕ ಚರಿತ್ರೆಯನ್ನು ರಾಷ್ಟ್ರೀಯವಾದಿ ದೃಷ್ಟಿಕೋನದಿಂದ ರಚಿಸಿದರು.

ರೋಮಿಲಾ ಥಾಪರ್ ಅವರು ಭಾರತದಲ್ಲಿ ಕೋಮುವಾದ ಎಂದರೆ ಹೇಗೆ, ಹಿಂದು ಎಂಬ ಏಕರೂಪಿ ಧಾರ್ಮಿಕ ಗುರುತನ್ನು ಕಟ್ಟಿಕೊಂಡು ಬೆಳೆದ ಐಡಿಯಾಲಜಿಯಾಗಿದೆ ಎಂಬುದನ್ನು ವಾದಿಸಲು ವಸಾಹತು ಕಾಲದ ಇತಿಹಾಸವನ್ನು ಪರಿಶೀಲನೆಗೆ ಒಡ್ಡುತ್ತಾರೆ.[೨] ವಸಹಾತುಶಾಹಿ ಚರಿತ್ರಕಾರರು ಬ್ರಿಟಿಷರ ಹಿತದೃಷ್ಟಿಯಿಂದ ಭಾರತದ ಜನರ ಅಧ್ಯಯನ ನಡೆಸಿದರು. ರಾಷ್ಟ್ರೀಯವಾದಿ ಚರಿತ್ರೆಕಾರರು ಮೇಲ್ವರ್ಣದ, ಮೇಲ್ವರ್ಗದ ಜನರ ದೃಷ್ಟಿಯಿಂದ ಚರಿತ್ರೆಯನ್ನು ನೋಡಿದರು. ಮಾರ್ಕ್ಸ್‌ವಾದಿಗಳು ಶೋಷಿತವರ್ಗದ ಜನರ ದೃಷ್ಟಿಯಿಂದ ಚರಿತ್ರೆ ನಿರ್ಮಿಸಿದರು. ಸಬಾಲ್ಟರ್ನ್ ಚರಿತ್ರೆಕಾರರು ಕೆಳವರ್ಗದ ಜನರ ಚರಿತ್ರೆ ನಿರ್ಮಿಸಿದರು.

ಭಾರತದಲ್ಲಿ ಮಾರ್ಕ್ಸ್‌ವಾದಿ ಚರಿತ್ರೆಕಾರರೆಂದರೆ ಡಿ.ಡಿ.ಕೊಸಾಂಬಿ, ಆರ್.ಎಸ್.ಶರ್ಮ, ರೋಮಿಲಾ ಥಾಪರ್, ಡಿ.ಎನ್.ಝಾ, ಇರ್ಫಾನ್ ಹಬೀಬ್, ಬಿಪನ್‌ಚಂದ್ರ, ಸುಮಿತ್ ಸರ್ಕಾರ್ ಮೊದಲಾದವರು. ಕರ್ನಾಟಕದಲ್ಲಿ ಹೆಸರಿಸಬಹುದಾದ ಮಾರ್ಕ್ಸ್‌ವಾದಿ ಚರಿತ್ರೆಕಾರರೆಂದರೆ ಎಸ್.ಚಂದ್ರಶೇಖರ್, ಬಿ.ಸುರೇಂದ್ರರಾವ್, ಎಸ್.ಶೆಟ್ಟರ್, ಕೇಶವನ್ ವೆಲುತೆಟ್, ಸೆಬಾಸ್ಟಿಯನ್ ಜೋಸೆಫ್, ಆರ್.ಎನ್.ನಂದಿ, ಎಸ್.ಎ.ಬಾರಿ, ರಾಜಾರಾಮ ಹೆಗಡೆ, ಅಶೋಕ್ ಶೆಟ್ಟರ್ ಮುಂತಾದವರು.

ಇತ್ತೀಚೆಗೆ ಭಾರತದಲ್ಲಿ ಸಬಾಲ್ಟರ್ನ್ ಪಂಥದ ಚರಿತ್ರೆ ರಚನೆಯು ಹೆಚ್ಚು ಪ್ರಾಮುಖ್ಯತೆ ಪಡೆಯುತ್ತಿದೆ. ರಂಜಿತ್ ಗುಹಾ, ಪಾರ್ಥ ಚಟರ್ಜಿ, ಗ್ಯಾನೇಂದ್ರಪಾಂಡೆ, ಡೇವಿಡ್ ಆರ್ನಾಲ್ಡ್, ಡೇವಿಡ್ ಹರ್ಡಿಮನ್, ದೀಪೇಶ್ ಚಕ್ರವರ್ತಿ ಮುಂತಾದವರು. ಈ ಸಬಾಲ್ಟರ್ನ್ ಪಂಥದವರು ಭಾರತದಲ್ಲಿ ಹೆಚ್ಚು ಪ್ರಚಾರ ಪಡೆಯುವಂತೆ ಮಾಡಿದರು.[೩] ಇವರು ವಸಾಹತು ಇತಿಹಾಸವನ್ನು ಹೆಜಮೊನಿಯ ಪರಿಕಲ್ಪನೆಯಲ್ಲಿ ಟೀಕೆಗೊಳಪಡಿಸಿದರು. ಮಾರ್ಕ್ಸ್‌ವಾದವನ್ನು ಒಂದು ಸ್ಥಾಪಕತತ್ವ ಎಂದು ತಿರಸ್ಕರಿಸಿದರು. ರಾಷ್ಟ್ರೀಯ ಚಳುವಳಿಯನ್ನು ಕುರಿತಾದ ಚರಿತ್ರೆ ಬರವಣಿಗೆಯಲ್ಲಿ ವಸಾಹತುಶಾಹಿ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ ಹಾಗೂ ಸಬಾಲ್ಟರ್ನ್ ಚರಿತ್ರೆಕಾರರ ಸೈದ್ಧಾಂತಿಕ ನಿಲುವುಗಳನ್ನು ಬಿಪನ್‌ಚಂದ್ರ ಅವರು ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್ ಎಂಬ ಗ್ರಂಥದಲ್ಲಿ ವಿವರಸಿದ್ದಾರೆ. ಬ್ರಿಟಿಷ್ ವೈಸ್‌ರಾಯಿಗಳಾದ ಲಾರ್ಡ್ ಡಫ್‌ರಿನ್, ಕರ್ಜನ್, ಮಿಂಟೊ ಹಾಗೂ ಭಾರತದ ರಾಜ್ಯ ಕಾರ್ಯದರ್ಶಿ ಹ್ಯಾಮಿಲ್ಟನ್ ಮುಂತಾದವರು ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿ ಆಡಳಿತವನ್ನು ಬಲಪಡಿಸುವ ರೀತಿಯಲ್ಲಿ ಚರಿತ್ರೆಯನ್ನು ಬರೆಯುವಂತೆ ಪ್ರೇರೇಪಿಸಿರುವುದನ್ನು ಬಿಪನ್‌ಚಂದ್ರ ಅವರು 'ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್' ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.[೪]

ವಸಾಹತೋತ್ತರ ವಿಚಾರಗಳನ್ನು ಒಪ್ಪಿಕೊಂಡ ಆಶಿಸ್ ನಂದಿಯಂಥ ಚಿಂತಕರು ಭಾರತೀಯರ ಶ್ರದ್ಧಾ ಪ್ರಪಂಚವನ್ನು ಕೋಮುವಾದಿ ನಿರೂಪಣೆಯಿಂದ ಬಿಡಿಸಲು ಭಾರತೀಯ ಸಂಪ್ರದಾಯದ ಕುರಿತು ಪಾಶ್ಚಾತ್ಯ ಆಧುನಿಕ ಕಥನಗಳನ್ನು ಒಟ್ಟಾರೆಯಾಗಿ ತಿರಸ್ಕರಿಸುವುದೊಂದೆ ಮಾರ್ಗ ಎಂಬುದಾಗಿ ರಾಜಾರಾಮ ಹೆಗಡೆ ಅವರು 'ಭಾರತೀಯ ಇತಿಹಾಸ ಸಮಾಜ ಮತ್ತು ಸಂಸ್ಕೃತಿ' ಎಂಬ ಕೃತಿಯಲ್ಲಿ ತಿಳಿಸಿದ್ದಾರೆ.[೫]

ವಸಾಹತುಶಾಹಿ ಕಾಲದ ಬ್ರಿಟಿಷರ ಆಡಳಿತಕ್ಕೆ ಸಂಬಂಧಿಸಿದ ಮಾಹಿತಿಯನ್ನು ವಿವಿಧ ಮೂಲಗಳಿಂದ ಪಡೆಯಬೇಕಾಗುತ್ತದೆ. ಇವುಗಳಲ್ಲಿ ಗೆಜೆಟಿಯರ್‌ಗಳು, ಬಿ.ಎಲ್.ರೈಸ್, ಎಂ.ಶೇಷಾದ್ರಿ ಅವರ ಶಾಸನ ಸಂಪುಟಗಳು ಮುಖ್ಯವಾಗುತ್ತವೆ. ಬ್ರಿಟಿಷ್ ವಿದ್ವಾಂಸರುಗಳು ವಸಾಹತುಶಾಹಿತ್ವವನ್ನು ಶಾಶ್ವತಗೊಳಿಸುವ ದೃಷ್ಟಿಕೋನದಲ್ಲಿ ಚರಿತ್ರೆಯನ್ನು ರಚಿಸಿದರು. ಆದರೆ ಸ್ವದೇಶಿ ಬರಹಗಾರರು ವಸಾಹತುಶಾಹಿಗಳ ವಿರುದ್ಧದ ನಿಲುವುಗಳ ಮೂಲಕ ಚರಿತ್ರೆಯನ್ನು ರಚಿಸಿದರು. ಅಂತಹ ಕೃತಿಗಳೆಂದರೆ ಸುಮಿತ್ ಸರ್ಕಾರ್ ಅವರ 'ಮಾಡ್ರನ್ ಇಂಡಿಯಾ', ಎಸ್.ಎನ್.ಸೇನ್ ಅವರ 'ಹಿಸ್ಟರಿ ಆಫ್ ಫ್ರೀಡಂ ಮೂಮೆಂಟ್ ಇನ್ ಇಂಡಿಯಾ', ಬಿಪನ್ ಚಂದ್ರ ಅವರ 'ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡನ್ಸ್', ಆರ್.ಸಿ.ಮಜುಮ್‌ದಾರ್ ಅವರ 'ಭಾರತ ಸ್ವಾತಂತ್ರ್ಯ ಸಂಗ್ರಾಮ', ಕೆ.ಎಸ್.ನಾರಾಯಣಸ್ವಾಮಿ ಅವರ 'ಭಾರತದ ವಿಮೋಚನಾಯಾತ್ರೆ', ಎ.ಪಿ.ಶ್ರೀನಿವಾಸಮೂರ್ತಿ ಅವರ 'ಭಾರತ ಸ್ವಾತಂತ್ರ್ಯ ಚಳುವಳಿ', ಜಿ.ರಾಮಕೃಷ್ಣ ಅವರ 'ಸ್ವಾತಂತ್ರ್ಯ ಸಂಗ್ರಾಮದ ಹೆಜ್ಜೆಗಳು', ಸೂರ್ಯನಾಥ ಕಾಮತ್ ಅವರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು', ಸಂಪುಟ ೧ ಮತ್ತು ೨, ಎನ್.ಪಿ.ಶಂಕರ ನಾರಾಯಣರಾವ್ ಅವರ 'ಸ್ವಾತಂತ್ರ್ಯ ಅಗ್ನಿದಿವ್ಯ', ಜಿ.ಎಸ್.ದೀಕ್ಷಿತ್ ಅವರ 'ಭಾರತ ಸ್ವಾತಂತ್ರ್ಯ ಚಳುವಳಿ', ಕೆ.ವಿ.ಸುಬ್ಬಣ್ಣ ಅವರ 'ಸ್ವರಾಜ್ಯಹಾದಿ ಹೆಜ್ಜೆಗಳು', ಎಲ್.ಎಸ್.ಶೇಷಗಿರಿರಾವ್ ಅವರ 'ಭಾರತ ಸ್ವಾತಂತ್ರ ಸಂಗ್ರಾಮ' ಇನ್ನು ಮುಂತಾದ ಅನೇಕ ಕೃತಿಗಳು ವಸಾಹತುಶಾಹಿ ವಿರುದ್ಧವಾಗಿ ಬಂದವು.

ಕರ್ನಾಟಕದಲ್ಲಿ ವಸಾಹತುಶಾಹಿ ಆಡಳಿತ ಮತ್ತು ಅವರ ವಿರುದ್ಧದ ಹೋರಾಟವನ್ನು ಕುರಿತು ಹಲವು ಕೃತಿಗಳು ಪ್ರಕಟಗೊಂಡವು. ಇವು ವಿವಿಧ ದೃಷ್ಟಿಕೋನಗಳಿಂದ ಕೂಡಿದ್ದು ಸ್ಥಳೀಯ ಸಮಾಜ, ವಸಾಹತು ಕಾಲದಲ್ಲಿ ಇಲ್ಲಿನ ಜನತೆ ಸ್ಪಂದಿಸಿದ ರೀತಿ ಅವರ ವಿರುದ್ಧದ ಹೋರಾಟಗಳು ಜನರ ಸ್ಥಿತಿಗತಿ ಮುಂತಾದ ವಿಚಾರ ಕುರಿತು ಬರೆಯಲ್ಪಟ್ಟಿವೆ. ಬಹುತೇಕವಾಗಿ ಇವುಗಳಲ್ಲಿ ವಸಾಹತು ಕಾಲದ ವಿಚಾರಗಳನ್ನು ಸೈದ್ಧಾಂತಿಕವಾಗಿ ವಿಶ್ಲೇಷಿಸುವುದರ ಮೂಲಕ ತಾತ್ವಿಕ ನಿಲುವು ಕಾಣುವ ಪ್ರಯತ್ನ ನಡೆಸಲಾಗಿದೆ. ಈ ದೃಷ್ಟಿಕೋನದಲ್ಲಿ ಬಂದ ಕೃತಿಗಳೆಂದರೆ ಎಸ್.ಚಂದ್ರಶೇಖರ್ ಅವರ 'ಆಧುನಿಕ ಕರ್ನಾಟಕದ ಆಂದೋಲನಗಳು', 'ದಕ್ಷಿಣ ಭಾರತದ ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ', ಸೂರ್ಯನಾಥ ಕಾಮತ್ ಅವರ 'ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳುವಳಿ', ಕೆ.ವೀರತಪ್ಪ ಅವರ 'ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ', ಡಿ.ಲಿಂಗಯ್ಯ ಅವರ 'ಶಿವಪುರ ಸತ್ಯಾಗ್ರಹ', ಬಿ.ಎಸ್.ಮಹಾಬಲೇಶ್ವರಪ್ಪ ಅವರ 'ಈಸೂರಿನ ವೀರಗಾಥೆ', ಬಿ.ಕೆ.ರಾಮಚಂದ್ರ ಅವರ 'ಕರ್ನಾಟಕ ಜಲಿಯನ್ ವಾಲಾಬಾಗ್ ದುರಂತ', ಸಿದ್ದವ್ವನಹಳ್ಳಿ ಕೃಷ್ಣಶರ್ಮ ಅವರ 'ಗಾಂಧಿ ಮತ್ತು ಕರ್ನಾಟಕ', ಎಚ್.ಎಸ್.ದೊರೆಸ್ವಾಮಿ ಅವರ 'ಹೋರಾಟದ ಹೆಜ್ಜೆಗಳು' ಮುಂತಾದವು ಇದರ ವ್ಯಾಪ್ತಿಯಲ್ಲಿ ಬರುತ್ತವೆ.

ತುಮಕೂರು ಪ್ರದೇಶದಲ್ಲಿ ವಸಾಹತುಶಾಹಿಗಳ ಆಡಳಿತ ವ್ಯವಸ್ಥೆ, ಅವರ ಸುಧಾರಣೆಗಳು, ಅವುಗಳ ಬಗ್ಗೆ ಇಲ್ಲಿನ ಜನರ ನಿಲುವುಗಳು ಹಾಗೂ ಸ್ಥಳೀಯ ಜನರಲ್ಲಿ ಉಂಟಾದ ಸ್ವಾತಂತ್ರ್ಯ ಹೋರಾಟದ ಮನೋಪ್ರವೃತ್ತಿಗಳು, ಸ್ವಾತಂತ್ರ್ಯ ಚಳುವಳಿಯ ಸಮಯದಲ್ಲಿ ಮತ್ತು ನಂತರ ಸಂಭವಿಸಿದ ಘಟನೆಗಳು ಹಾಗೂ ಆಡಳಿತದ ಬೆಳವಣಿಗೆ ಕುರಿತಾಗಿ ಅಧ್ಯಯನ ಮಾಡಲಾಗಿದೆ. ವಸಾಹತುಕಾಲವನ್ನು ಅಧ್ಯಯನದ ದೃಷ್ಠಿಯಿಂದ ಎರಡು ಘಟಕಗಳಾಗಿ ವಿಂಗಡಿಸಿದೆ. ಇವುಗಳ ಅಧ್ಯಯನವು ವಿವಿಧ ಕೃತಿಗಳು, ಪತ್ರಿಕೆಗಳು, ಲೇಖನಗಳು, ಸ್ಮರಣಸಂಚಿಕೆಗಳು, ಸರ್ಕಾರಿ ವರದಿಗಳು, ದಾಖಲೆಗಳನ್ನು ಪರಿಶೀಲಿಸುವುದರ ಮೂಲಕ ಸೈದ್ಧಾಂತಿಕ ದೃಷ್ಟಿಕೋನದಲ್ಲಿ ವಿವರಿಸಲು ಯತ್ನಿಸಲಾಗಿದೆ.

ಈ ಅಧ್ಯಾಯವನ್ನು ಪ್ರಮುಖವಾಗಿ ಎರಡು ಹಂತದಲ್ಲಿ ವಿವರಿಸಲಾಗಿದೆ. ಮೊದಲ ಹಂತದಲ್ಲಿ ವಸಾಹತುಶಾಹಿ ಆಡಳಿತದ ಪ್ರಾರಂಭ-ಅಧಿಕಾರ ವಿಸ್ತರಣೆ ಕುರಿತು ಚರ್ಚಿಸಲಾಗಿದೆ. ಎರಡನೆಯ ಹಂತದಲ್ಲಿ ಸ್ವಾತಂತ್ರ್ಯ ಹೋರಾಟಗಳಾದ ಸ್ವದೇಶಿ ಚಳುವಳಿ, ಅಸಹಕಾರ ಚಳುವಳಿ, ಗಾಂಧೀಜಿಯವರ ಪ್ರವಾಸ, ಕಾನೂನುಭಂಗ ಚಳುವಳಿ, ಕ್ವಿಟ್ ಇಂಡಿಯಾ ಚಳುವಳಿಗಳನ್ನು ಕುರಿತು ಚರ್ಚಿಸಲಾಗಿದೆ.

ವಸಾಹತು ಕಾಲದ ಚರಿತ್ರೆಯನ್ನು ಅಧ್ಯಯನ ಮಾಡಲು ಹಲವು ಕೃತಿಗಳು ಲಭ್ಯವಾಗಿವೆ. ಕೆ.ಅಭಿಶಂಕರರವರ ಸಂಪಾದಕತ್ವದ 'ತುಮಕೂರು ಜಿಲ್ಲಾ ಗೆಜೆಟಿಯರ್', 'ಮೈಸೂರು ರಾಜ್ಯ ಗೆಜೆಟಿಯರ್', ಬಿ.ಷೇಕ್ ಅಲಿ ಅವರ ಸಂಪಾದನದ 'ಕರ್ನಾಟಕ ಚರಿತ್ರೆ ಸಂಪುಟ ೫', 'ಕರ್ನಾಟಕ ಚರಿತ್ರೆ ಸಂಪುಟ ೭', ಸೂರ್ಯನಾಥ ಕಾಮತ್‌ರವರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು', ಸಂಪುಟ ೧ ಮತ್ತು ೨, ದೇ. ಜವರೇಗೌಡರವರ 'ಸರ್ವೋದಯ ಪಥ', ಜಿ.ಎಸ್.ಹಾಲಪ್ಪನವರ 'ಫ್ರೀಡಂಮೂಮೆಂಟ್ ಇನ್ ಕರ್ನಾಟಕ', ಭಾಗ-೨, ಸಿ.ಎನ್.ಭಾಸ್ಕರಪ್ಪರವರ ಸಂಪಾದನದ 'ತುಮಕೂರು ಜಿಲ್ಲಾ ದರ್ಶನ', ಡಿ.ಎನ್.ಯೋಗೀಶ್‌ರವರ 'ಜಯಮಂಗಲಿ' ಸ್ಮರಣ ಸಂಚಿಕೆ ಮುಂತಾದವು ಅಧ್ಯಯನಕ್ಕೆ ನೆರವಾಗಿವೆ.

## ೩.೧. ಪ್ರಾರಂಭ-ಅಧಿಕಾರ-ವಿಸ್ತರಣೆ

ಭಾರತಕ್ಕೆ ವಸಾಹತುಶಾಹಿಗಳ ಆಗಮನ ಭಾರತದ ಚರಿತ್ರೆಯಲ್ಲಿ ಒಂದು ಅಧ್ಯಾಯವನ್ನೇ ಸೃಷ್ಟಿಸಿತು ಎಂದರೆ ತಪ್ಪಾಗಲಾರದು. ತುಮಕೂರು ಪ್ರದೇಶವನ್ನು ಆಡಳಿತ ಮಾಡಿರುವ ವಸಾಹತುಶಾಹಿಗಳಲ್ಲಿ ಬ್ರಿಟಿಷರು ಪ್ರಮುಖರಾಗಿದ್ದಾರೆ. ಅವರು ಈ ಪ್ರದೇಶವನ್ನು ತಮ್ಮ ಅಧಿಪತ್ಯಕ್ಕೆ ಒಳಪಡಿಸುವ ವೇಳೆಗೆ ಭಾರತದಾದ್ಯಂತ ವಿಸ್ತರಿಸಿದ್ದ ಇತರೆ ಯುರೋಪಿನ ವಸಾಹತುಶಾಹಿಗಳಾದ ಪೋರ್ಚುಗೀಸರು, ಡಚ್ಚರು ಮತ್ತು ಫ್ರೆಂಚರನ್ನು ಬ್ರಿಟಿಷರು ಭಾರತದಿಂದ ಕಾಲ್ತೆಗೆಯುವಂತೆ ಮಾಡಿದ್ದಲ್ಲದೆ. ಭಾರತದ ಹಲವಾರು ಸಂಸ್ಥಾನಗಳನ್ನು ತಮ್ಮ ಹಿಡಿತಕ್ಕೆ ತೆಗೆದುಕೊಂಡರು. ಅದರಂತೆ ಟಿಪ್ಪುಸುಲ್ತಾನ್ ಮತ್ತು ಬ್ರಿಟಿಷರ ನಡುವೆ ನಡೆದ ಮೂರನೇ ಆಂಗ್ಲೋ-ಮೈಸೂರು ಕದನದ ನಂತರದ ಪರಿಸ್ಥಿತಿಯ ಲಾಭ ಪಡೆದು ಮೈಸೂರು ಸಂಸ್ಥಾನವನ್ನು ತಮ್ಮ ಹಿಡಿತಕ್ಕೆ ಒಳಪಡಿಸುವ ಪ್ರಯತ್ನ ಬ್ರಿಟಿಷರಿಂದ ನಡೆಯಿತು. ಈ

ಮೂಲಕ ತುಮಕೂರು ಪ್ರದೇಶಕ್ಕೆ ಬ್ರಿಟಿಷರ ಆಗಮನವಾಗುತ್ತದೆ. ತುಮಕೂರು ಪ್ರದೇಶ ಬಹುತೇಕ ಮೈಸೂರು ರಾಜ್ಯಕ್ಕೆ ಒಳಪಟ್ಟಿತ್ತು. ಹೈದರಾಲಿಯು ಸಿರಾ ಮತ್ತು ಮಧುಗಿರಿಗಳನ್ನು ವಶಪಡಿಸಿಕೊಂಡನು. ಅವನ ಮಗ ಟಿಪ್ಪುವಿನ ಕಾಲದಲ್ಲೂ ಈ ಭಾಗಗಳು ಅವನ ಅಧೀನದಲ್ಲಿದ್ದವು. ಮೈಸೂರು ರಾಜ್ಯವನ್ನು ವಶಪಡಿಸಿಕೊಳ್ಳುವ ದೃಷ್ಟಿಯಿಂದ ಬ್ರಿಟಿಷರು ಹೈದರಾಲಿ, ನಂತರ ಟಿಪ್ಪುವಿನ ವಿರುದ್ಧ ಹೋರಾಟ ನಡೆಸಿದರು. ಅಂತಿಮವಾಗಿ ಕ್ರಿ.ಶ.೧೭೯೯ರ ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಮರಣದೊಂದಿಗೆ ಮೈಸೂರು ರಾಜ್ಯ ಬ್ರಿಟಿಷರ ಅಧೀನವಾಯಿತು. ಈ ಮೂಲಕ ಮೈಸೂರು ಸಂಸ್ಥಾನಕ್ಕೆ ಸೇರಿದ ತುಮಕೂರು ಪ್ರದೇಶಕ್ಕೂ ಬ್ರಿಟಿಷರ ಅಧಿಕಾರ ವಿಸ್ತರಣೆಯಾಯಿತು. ಬಿ.ಷೇಕ್ ಅಲಿರವರ ಕರ್ನಾಟಕ ಚರಿತ್ರೆ ಸಂಪುಟ ೫ರಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಬ್ರಿಟಿಷರೊಡನೆ ನಡೆಸಿದ ಹೋರಾಟವನ್ನು ಉಲ್ಲೇಖಿಸಲಾಗಿದೆ.

ಮೈಸೂರು ರಾಜ್ಯವು ಬ್ರಿಟಿಷರ ನೆರವಿನಿಂದ ಮೈಸೂರು ಒಡೆಯರಿಗೆ ಸೇರಿತು. ಆದರೆ ಅವರ ಆಡಳಿತ ಮತ್ತು ಸೈನಿಕ ಕಾರ್ಯಚರಣೆ ಬ್ರಿಟಿಷರ ಹತೋಟಿಯಲ್ಲಿತ್ತು. ಅದಕ್ಕೆ ಪ್ರತಿಯಾಗಿ ಮೈಸೂರು ರಾಜ್ಯ ಬ್ರಿಟಿಷರಿಗೆ ಪೊಗದಿ ಕೊಡಬೇಕಾಯಿತು. ಬ್ರಿಟಿಷರ ಸಹಾಯಕ ಸೈನ್ಯ ಪದ್ಧತಿಯನ್ನು ಒಪ್ಪಿಕೊಂಡು ಅವರ ವೆಚ್ಚವನ್ನೆಲ್ಲಾ ಮೈಸೂರು ರಾಜ್ಯವೇ ಭರಿಸಬೇಕಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರು ರಾಜ್ಯರೋಹಣ ಮಾಡಿದಾಗ ಬ್ಯಾರಿಕ್ಲೋಸ್ ರೆಸಿಡೆಂಟನಾಗಿಯೂ, ಪೂರ್ಣಯ್ಯನವರು ದಿವಾನರಾಗಿಯೂ ಅಧಿಕಾರ ಸ್ವೀಕಾರ ಮಾಡಿದರು. ರೆಸಿಡೆಂಟನ, ಒಡೆಯರ, ದಿವಾನರ ಪಾತ್ರವೇನು ಎಂಬುದನ್ನು ಸವಿಸ್ತಾರವಾಗಿ ತಿಳಿಸುವ ಆಜ್ಞಾ ಪತ್ರವನ್ನು ವೆಲ್ಲೆಸ್ಲಿ ಕಳುಹಿಸಿದ ಎಂದು ಎಂ.ವಿ.ಕೃಷ್ಣರಾವ್ ಮತ್ತು ಕೇಶವ ಭಟ್ಟ ಎಂ. ರವರ ಕರ್ನಾಟಕ ಇತಿಹಾಸ ದರ್ಶನ ಕೃತಿಯಿಂದ ತಿಳಿಯುತ್ತದೆ.[೬] ಈ ಮೂಲಕ ಬ್ರಿಟಿಷರು ಪರೋಕ್ಷವಾಗಿ ಮೈಸೂರು ಸಂಸ್ಥಾನದ ಆಡಳಿತವನ್ನು ತಮ್ಮ ನಿಯಂತ್ರಣದಲ್ಲಿರಿಸಿದರು ಎಂಬುದು ವ್ಯಕ್ತವಾಗುತ್ತದೆ.

## ೩.೨. ಸ್ವಾತಂತ್ರ್ಯ ಚಳುವಳಿಗಳು

ಇಪ್ಪತ್ತನೆಯ ಶತಮಾನದ ಚರಿತ್ರೆ ಲೇಖನ ಶಾಸ್ತ್ರದಲ್ಲಿ ಪ್ರಮುಖ ಲಕ್ಷಣವಾಗಿ ಕಂಡುಬಂದಿರುವ ರಾಷ್ಟ್ರೀಯತೆ ಮತ್ತು ಸ್ವಾತಂತ್ರ್ಯ ಚಳುವಳಿಯ ಇತಿಹಾಸ ಪ್ರಾಮುಖ್ಯತೆ ಹೊಂದಿದೆ. ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ನಡೆದಂತೆ ಈ ಅವಧಿಯಲ್ಲಿ ತುಮಕೂರು ಪ್ರದೇಶದಲ್ಲಿ ಹಲವು ಹೋರಾಟಗಳು ನಡೆದಿವೆ. ಅವುಗಳನ್ನು ಈ ಕೆಳಕಂಡಂತೆ ಹೆಸರಿಸಿ ವಿವರಿಸಲಾಗಿದೆ.

೧. ಅಸಹಕಾರ ಚಳುವಳಿ ೨. ಗಾಂಧೀಜಿಯವರ ಪ್ರವಾಸ ೩. ನಾಗರಿಕ ಕಾನೂನು ಭಂಗ ಚಳುವಳಿ ೪. ಕ್ವಿಟ್ ಇಂಡಿಯಾ ಚಳುವಳಿ

ಈ ಹೋರಾಟ ಚರಿತ್ರೆಯನ್ನು ಅಧ್ಯಯನ ಮಾಡಲು ಅನೇಕ ಕೃತಿಗಳು, ಸರ್ಕಾರಿ ದಾಖಲೆ ಪತ್ರಗಳು, ಲೇಖನಗಳು, ಪತ್ರಿಕೆಗಳು ಲಭ್ಯವಾಗಿವೆ. ಅವುಗಳನ್ನು ಈ ಕೆಳಕಂಡಂತೆ ತಿಳಿಸಲಾಗಿದೆ. ಸೂರ್ಯನಾಥ ಕಾಮತ್‌ರವರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು', ಸಂಪುಟ ೧ ಮತ್ತು ಸಂಪುಟ ೨ರಲ್ಲಿ ತುಮಕೂರು ಜಿಲ್ಲೆಯ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರ ಅನುಭವದ ಹೇಳಿಕಗಳನ್ನು ಸಂಗ್ರಹಿಸಲಾಗಿದೆ. ಇದರಿಂದ ಈ ಭಾಗದಲ್ಲಿ ಬ್ರಿಟಿಷರ ವಿರುದ್ಧ ನಡೆದ ವಿವಿಧ ಚಳುವಳಿಗಳ ಪ್ರಮುಖ ಘಟನೆಗಳನ್ನು ತಿಳಿಸಲಾಗಿದೆ. ಕೆ.ವೀರತಪ್ಪರವರ 'ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳುವಳಿ' ಎಂಬ ಕೃತಿಯಲ್ಲಿ ಅಂದಿನ ಜನತೆಯ ಶಿಕ್ಷಣ ಮಟ್ಟ, ರಾಜಕೀಯ ಜಾಗೃತಿ ಕುರಿತಾಗಿ ವಿವರಿಸಲಾಗಿದೆ. ಕೆ.ಅಭಿಶಂಕರರವರ ಸಂಪಾದಕತ್ವದ 'ತುಮಕೂರು ಜಿಲ್ಲಾ ಗೆಜೆಟಿಯರ್', ಮೈಸೂರು ರಾಜ್ಯ ಗೆಜೆಟಿಯರ್ ಗಳಿಂದ ಅಂದಿನ ಆಡಳಿತದ ಬೆಳವಣಿಗೆ, ಸ್ವಾತಂತ್ರ್ಯ ಚಳುವಳಿಗಳು, ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಸಂಗತಿಗಳು ಮುಂತಾದವುಗಳನ್ನು ತಿಳಿಸಲಾಗಿದೆ. ಜಿ.ಎಸ್.ಹಾಲಪ್ಪರವರ 'ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ' ಭಾಗ-೨ರಲ್ಲಿ ಮೈಸೂರು ಸಂಸ್ಥಾನದಲ್ಲಿ ಪ್ರಾಂತಿಯ ಕಾಂಗ್ರೆಸ್ ಮತ್ತು ಜಿಲ್ಲಾ ಕಾಂಗ್ರೆಸ್ ಕಮಿಟಿಗಳ ಹುಟ್ಟು ಮತ್ತು ಬೆಳವಣಿಗೆಯನ್ನು ಕುರಿತು ವಿಶ್ಲೇಷಿಸಲಾಗಿದೆ. ಫ್ರಾನ್ಸಿಸ್ ಬುಕಾನನ್ ಬರೆದಿರುವ 'ಎ ಜರ್ನಿ ಫ್ರಮ್ ಮದ್ರಾಸ್ ಥ್ರೂ ದಿ ಮೈಸೂರು' ಸಂಪುಟ ೧ರಲ್ಲಿ ಅಂದಿನ ಆರ್ಥಿಕ ಸ್ಥಿತಿ-ಗತಿಯ ಬಗ್ಗೆ ಉಲ್ಲೇಖಿಸಲಾಗಿದೆ. ಸಿದ್ಧವ್ವನಹಳ್ಳಿ ಕೃಷ್ಣಶರ್ಮರವರ 'ಗಾಂಧಿ ಮತ್ತು ಕರ್ನಾಟಕ' ಎಂಬ ಕೃತಿಯಲ್ಲಿ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ಪ್ರವಾಸ, ಅವರ ರಚನಾತ್ಮಕ ಕಾರ್ಯಗಳನ್ನು ಕುರಿತು ವಿವರಿಸಲಾಗಿದೆ. ಎಸ್.ಚಂದ್ರಶೇಖರ್‌ರವರ 'ಆಧುನಿಕ ಕರ್ನಾಟಕದ ಆಂದೋಲನಗಳು ಮತ್ತು ದಕ್ಷಿಣ ಭಾರತದ ವಸಾಹತು ಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ' ಎಂಬ ಕೃತಿಗಳಲ್ಲಿ ಭಾರತ ಹಾಗೂ ಕರ್ನಾಟಕದಲ್ಲಿ ನಡೆದ ಹೋರಾಟಗಳನ್ನು ಸೈದ್ಧಾಂತಿಕವಾಗಿ ವಿಶ್ಲೇಷಿಸಿದ್ದಾರೆ. ಅಂದರೆ ವಸಾಹತುಶಾಹಿ, ಸಾಮ್ರಾಜ್ಯಶಾಹಿ, ಮೊದಲು ರಾಷ್ಟ್ರೀಯವಾದಿ ನಾಯಕರು ಒಡ್ಡಿದ ಬಲೆಯಲ್ಲಿ ಸಿಲುಕಿಕೊಂಡು ಚರಿತ್ರೆ ರಚನೆ ಮಾಡಿರುವುದನ್ನು ವಿವರಿಸಿದ್ದಾರೆ.

ಬಿ.ಎಸ್.ಮಹಾಬಲೇಶ್ವರಪ್ಪರವರ 'ಈಸೂರಿನ ವೀರಗಾಥೆ', ಸಿ.ಎನ್.ಭಾಸ್ಕರಪ್ಪ ಸಂಪಾದನದ 'ತುಮಕೂರು ಜಿಲ್ಲಾದರ್ಶನ', ಡಿ.ಎನ್.ಯೋಗೀಶ್‌ರವರ ಸಂಪಾದಕತ್ವದ 'ಜಯಮಂಗಲಿ' ಸ್ಮರಣ ಸಂಚಿಕೆ, ಕವಿತಾ ಕೃಷ್ಣರವರ 'ಸರ್ವೋದಯ ಕಿರಣ ಟಿ.ಎ.ದಾಸಪ್ಪ', ಎಂ.ವಿ.ಮೂಡ್ಲಗಿರೀಶ್‌ರವರ 'ಮಧುಗಿರಿ ಗಾಂಧಿ ಪುಟ್ಟತಿಮ್ಮಯ್ಯ' ಮುಂತಾದ ಕೃತಿಗಳು ತುಮಕೂರು ಪ್ರದೇಶದ ಸ್ವಾತಂತ್ರ್ಯ ಹೋರಾಟದ ಚರಿತ್ರೆಯನ್ನು ಅಧ್ಯಯನ ಮಾಡಲು ಸಹಾಯಕವಾಗಿವೆ. ಇವುಗಳ ಆಧಾರದ ಮೇಲೆ ಸೈದ್ಧಾಂತಿಕ ದೃಷ್ಟಿಕೋನದಲ್ಲಿ ಚಳುವಳಿಯ ವಿವಿಧ ಆಯಾಮಗಳನ್ನು ಚರ್ಚಿಸಲಾಗಿದೆ.

ತುಮಕೂರು ಪ್ರದೇಶದ ರಾಷ್ಟ್ರೀಯ ಚಳುವಳಿಗಳ ವಿಷಯ ವಿವರಿಸುವ ಮುನ್ನ ಅಂದಿನ ಸಮಾಜದ ಸ್ಥಿತಿ-ಗತಿಗಳನ್ನು ತಿಳಿಯುವುದು ಅಗತ್ಯವಾಗಿದೆ. ಇದನ್ನು ಹಲವು ಕೃತಿಗಳಲ್ಲಿ ವಿವರಿಸಲಾಗಿದೆ.

ಇದರಿಂದ ದೇಶದ ಸಾಮಾಜಿಕ, ಆರ್ಥಿಕ ಪರಿಸ್ಥಿತಿಯನ್ನು ಗ್ರಹಿಸಲು ಸಾಧ್ಯವಾಗಿದೆ. ಅಂದರೆ ಸಮಾಜದ ಪ್ರಧಾನ ವರ್ಗವಾದ ರೈತ ಸಮುದಾಯ, ಕಾರ್ಮಿಕ ಸಮುದಾಯ, ಕೆಳಸ್ತರದ ಸಮುದಾಯಗಳು ಪ್ರತಿ ಬಿಂಬಿಸುತ್ತವೆ. ರೈತರು ಧರ್ಮಪರರು, ಸಂಸ್ಕೃತರು ಅವರಿಗೆ ರಾಜಕೀಯದ ಮೇಲೆ ಆಸಕ್ತಿ ಇರಲಿಲ್ಲ. ಆದರೆ ದೇಶದ ಆರ್ಥಿಕಾಭಿವೃದ್ಧಿಯಲ್ಲಿ ಅವರದು ಬಹುಪಾಲು ಶ್ರಮವಿದೆ. ಗ್ರಾಮೀಣ ಬದುಕು ಅವರಿಗೆ ತೃಪ್ತಿಕರವಾಗಿದೆ. ಹಳ್ಳಿಹಳ್ಳಿಯೂ ಗಣತಂತ್ರವಾಗಿತ್ತು. ವ್ಯಾಪಾರ, ಉದ್ಯೋಗ ಯಾವುದರಲ್ಲಿಯೂ ರಾಜಕೀಯ ಬಂಧನವಿರಲಿಲ್ಲ ಎಂದು ಸಿದ್ದವ್ವನಹಳ್ಳಿ ಕೃಷ್ಣಶರ್ಮರವರ 'ಗಾಂಧಿ ಮತ್ತು ಕರ್ನಾಟಕ' ಕೃತಿಯಲ್ಲಿ ತಿಳಿಸಲಾಗಿದೆ.[೭] ಇಂತಹ ಸಂಮೃದ್ಧಿ ದೇಶದಲ್ಲಿ ಕುಂಠಿತವಾಗಲು ವಿದೇಶಿಯರೇ ಕಾರಣ ಎಂಬುದು ಪ್ರಾಥಮಿಕವಾಗಿ ತಿಳಿಯದಿದ್ದರೂ ನಂತರ ಅದರ ಅರಿವಾಯಿತು. ಬುದ್ಧಿಜೀವಿಗಳು ಸಮಾಜ ಸುಧಾರಕರು, ರಾಷ್ಟ್ರೀಯ ನಾಯಕರುಗಳು ವೃತ್ತ ಪತ್ರಿಕೆಗಳು ಮುಂತಾದವು ಇದಕ್ಕೆ ಕಾರಣವಾದವು ಮತ್ತು ರಾಷ್ಟ್ರೀಯತೆ ಉದಯಿಸಲು ಇವುಗಳ ಪಾತ್ರ ಪ್ರಮುಖವಾದುದು.

ಗ್ರಾಮೀಣ ಭಾಗದಲ್ಲಿದ್ದ ಜಮೀನ್ದಾರರು, ಪಟೇಲರು, ಶಾನುಬೋಗರು ಮುಂತಾದ ಪ್ರಬಲವರ್ಗದ ಜನರು ಬ್ರಿಟೀಷರ ಅಧೀನವಾದರು. ಬ್ರಿಟೀಷ್ ಸೈನ್ಯದಲ್ಲಿ ಸ್ಥಳೀಯ ರೈತರು ಸೇರಿದ್ದಲ್ಲದೆ, ಅವರ ಪೋಲಿಸ್ ಅಧಿಕಾರಿಗಳಿಗೆ ಅಧೀನರಾದರು. ಕಾಲಕ್ರಮೇಣ ಸ್ಥಳೀಯ ಪಾಳೆಯಗಾರರ ಸ್ವತಂತ್ರವು ಅಳಿದು ಹೋಯಿತು. ಭೂಕಂದಾಯ ನಿಗಧಿ ಮಾಡಿ ಅದರ ವಸೂಲಿ ಅಧಿಕಾರವನ್ನು ಅಮಲ್ದಾರರಿಗೆ ನೀಡಲಾಯಿತು. ಪೋಲೀಸ್ ಇಲಾಖೆ ವ್ಯವಸ್ಥಿತವಾಗಿ ಪೋಲೀಸ್ ರಾಜ್ಯವಾಗಿ ಮಾರ್ಪಾಡಾಯಿತು. ಸ್ಥಳೀಯ ಸೈನಿಕರ ಸಹಾಯದಿಂದ ದೇಶವನ್ನು ಗೆದ್ದ ಬುದ್ಧಿಜೀವಿಗಳು ವಸಾಹತುಶಾಹಿಗಳಾದರು ಎಂದು ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರ 'ಕರ್ನಾಟಕ ಇತಿಹಾಸ ದರ್ಶನ' ಕೃತಿಯಲ್ಲಿ ವ್ಯಕ್ತವಾಗಿದೆ.[೮]

ರಾಷ್ಟ್ರೀಯತೆ ಉತ್ತರ ಭಾರತದಲೆಲ್ಲಾ ಹರಡಿ ನಂತರ ಅದರ ಪ್ರಭಾವ ದಕ್ಷಿಣ ಭಾರತದ ಮೇಲಾಯಿತು. ಇದರಿಂದ ಸ್ಫೂರ್ತಿಗೊಂಡ ಸ್ವಾತಂತ್ರ್ಯಯೋಧರು, ರೈತರು ವಸಾಹತುಶಾಹಿಗಳ ವಿರುದ್ಧ ಪ್ರತಿಭಟನೆಗೆ ಮುಂದಾದರು ಎಂಬ ಅಂಶ ಎಸ್.ಚಂದ್ರಶೇಖರ್‌ರವರ 'ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ' ಕೃತಿಯಿಂದ ತಿಳಿದುಬರುತ್ತದೆ.[೯] ಈ ರಾಷ್ಟ್ರೀಯತೆ ಪ್ರಭಾವ ತುಮಕೂರು ಪ್ರದೇಶದಲ್ಲಿ ಹರಡಿ, ಇಲ್ಲಿನ ರೈತ ನಾಯಕರು, ಸ್ವಾತಂತ್ರ್ಯ ಯೋಧರು, ವಿದ್ಯಾರ್ಥಿಗಳು ವಸಾಹತುಶಾಹಿ ವಿರುದ್ಧ ಪ್ರತಿಭಟಿಸಿದರು.

೧೮೮೫ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಯಾಯಿತು. ಇದರಿಂದ ಸ್ವಾತಂತ್ರ್ಯ ಚಳುವಳಿಯಲ್ಲಿ ಹೊಸ ಅಧ್ಯಾಯ ಆರಂಭವಾಯಿತು. ಪತ್ರಿಕೆಗಾರರು, ಸಮಾಜ ಸುಧಾರಕರು, ಸ್ವಯಂ ಸಂಘಟನಾಕಾರರ ಕಾರ್ಯಚಟುವಟಿಕೆಗಳು ಚುರುಕುಗೊಂಡವು. ಕರ್ನಾಟಕದಲ್ಲಿಯೂ ಇದರ ಪ್ರಭಾವ ಕಂಡುಬಂದಿತು.

ಮೈಸೂರು ಸಂಸ್ಥಾನವು ಸ್ವಾತಂತ್ರ್ಯ ಚಳುವಳಿಯಲ್ಲಿ ಪ್ರಮುಖ ಪಾತ್ರವಹಿಸಿ ಭಾರತದ ಇತರೆ ಸಂಸ್ಥಾನಗಳಿಗೆ ಮಾದರಿಯಾಯಿತು ಎಂದು ಕೆ.ವೀರತಪ್ಪರವರ 'ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳುವಳಿ' ಕೃತಿಯಲ್ಲಿ ತಿಳಿಸಲಾಗಿದೆ.[೧೦] ೧೮೮೫ರಲ್ಲಿ ಸ್ಥಾಪನೆಯಾದ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಮೈಸೂರು ಸಂಸ್ಥಾನದಲ್ಲಿ ರಾಜಕೀಯ ಜಾಗೃತಿಯನ್ನುಂಟು ಮಾಡಿತು. ಇದರಿಂದ ಪತ್ರಿಕೆಗಾರರು, ಸಮಾಜ ಸುಧಾರಕರು, ಸ್ವಯಂ ಸೇವಾ ಸಂಘಟನೆಗಳ ಕಾರ್ಯಚಟುವಟಿಕೆಗಳು ಬಿರುಸುಗೊಂಡವು. ೧೮೮೧ರಲ್ಲೆ ಮೈಸೂರು ಸಂಸ್ಥಾನದಲ್ಲಿ ದಿವಾನ್ ರಂಗಾಚಾರ್ಲು "ಪ್ರಜಾಪ್ರತಿನಿಧಿ ಸಭೆ" ಸ್ಥಾಪಿಸಿದರು. ರಂಗಾಚಾರ್ಲುರಂತಹ ಭಾರತೀಯರು ಭಾರತದಲ್ಲಿ ಮೊತ್ತ ಮೊದಲ ಬಾರಿಗೆ ಪ್ರಜಾಪ್ರಭುತ್ವ ಸ್ಥಾಪನೆಗೆ ತಳಹದಿ ಹಾಕಿದರು ಎಂಬುದು ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರ ಸಂಪಾದನದ 'ಕರ್ನಾಟಕ ಇತಿಹಾಸ ದರ್ಶನ' ಕೃತಿಯಿಂದ ತಿಳಿಯುತ್ತದೆ.[೧೧] ೧೯೦೭ರಲ್ಲಿ ಸ್ಥಾಪನೆಯಾದ 'ನ್ಯಾಯ ವಿದಾಯಕ ಸಭೆಗಳಲ್ಲಿ ಹಾಗೂ ಪ್ರಜಾಪ್ರತಿನಿಧಿ ಸಭೆಗಳಲ್ಲಿ ನಡೆದ ಕಾರ್ಯಕಲಾಪಗಳಿಂದ ಪ್ರಜೆಗಳಲ್ಲಿ ಆಡಳಿತದಲ್ಲಿ ಆಸಕ್ತಿ, ಸ್ವಾತಂತ್ರ್ಯ ಪ್ರೇಮವನ್ನು ಹೆಚ್ಚಿಸಲು ನೆರವಾದವು ಎಂದು ಗೆಜೆಟಿಯರ್‌ನಲ್ಲಿ ತಿಳಿಸಲಾಗಿದೆ. ೧೯೧೮ರಲ್ಲಿ ಪ್ರಜಾಮಿತ್ರ ಮಂಡಲಿ ಸ್ಥಾಪನೆಗೊಂಡು ಹಿಂದುಳಿದ ವರ್ಗಗಳ ಸಮಿತಿಯ ನಾಯಕರಾಗಿ ಎಚ್.ಚನ್ನಯ್ಯ, ಬಸವಯ್ಯ, ಎಂ.ಸುಬ್ಬಯ್ಯ ಮುಂತಾದವರು ನಿಯೋಜಿತರಾದರು ಎಂಬುದಾಗಿ ಸಿ.ಎನ್.ಬಾಸ್ಕರಪ್ಪರವರ 'ತುಮಕೂರು ಜಿಲ್ಲಾದರ್ಶನ'ದಲ್ಲಿ ವ್ಯಕ್ತವಾಗಿದೆ.[೧೨] ಇಂತಹ ಕಾರ್ಯಚಟುವಟಿಕೆ ಗಳಿಂದ ಮೈಸೂರು ಸಂಸ್ಥಾನ ಅದರ ಭಾಗವಾಗಿದ್ದ ತುಮಕೂರು ಪ್ರದೇಶದಲ್ಲಿ ಸ್ವಾತಂತ್ರ್ಯ ಚಳುವಳಿಯ ಕಾವು ಏರತೊಡಗಿತು. ಇಂತಹ ಚಳುವಳಿ ಕುರಿತಾಗಿ ಬಂದಿರುವ ಕೃತಿಗಳನ್ನು ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

**ಅಸಹಕಾರ ಚಳುವಳಿ**

ಗಾಂಧೀಜಿಯವರು ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ೧೯೨೦ರಲ್ಲಿ ಕರೆ ನೀಡಿದ ಜನತಾಚಳುವಳಿ ಕುರಿತು ಎನ್.ಪಿ.ಶಂಕರ ನಾರಾಯಣರಾವ್‌ರವರ 'ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು' ಕೃತಿಯಲ್ಲಿ ತಿಳಿಸಲಾಗಿದೆ. ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟದ ಲಕ್ಷಣಗಳು ೧೯೨೦ರ ನಂತರ ಕಂಡುಬರುತ್ತದೆ. ಅಖಿಲಭಾರತ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನ ೧೯೨೦ರಲ್ಲಿ ನಾಗಪುರದಲ್ಲಿ ನಡೆಯಿತು. ಇದರಲ್ಲಿ ತೆಗೆದುಕೊಂಡ ಮಹತ್ವದ ನಿರ್ಣಯದಂತೆ ಗ್ರಾಮ, ತಾಲ್ಲೂಕು, ಜಿಲ್ಲಾ ಕಾಂಗ್ರೆಸ್ ಸಮಿತಿಗಳು, ಭಾಷಾವಾರು ಕಾಂಗ್ರೆಸ್ ಪ್ರಾಂತ್ಯ ಸಮಿತಿಗಳು ರಚನೆಯಾದವು ಎಂದು ಎನ್.ಪಿ.ಶಂಕರಣ ನಾರಾಯಣರಾವ್ ಉಲ್ಲೇಖಿಸಿದ್ದಾರೆ.[೧೩] ಅದರಂತೆ ೧೯೨೧ರ ನಂತರ ತುಮಕೂರು ಜಿಲ್ಲೆಯ ಅನೇಕ ಭಾಗಗಳಲ್ಲಿ ಕಾಂಗ್ರೆಸ್ ಸಮಿತಿಗಳು ಆರಂಭವಾದವು.

೧೯೨೭ರಲ್ಲಿ ಗಾಂಧೀಜಿಯವರು ತುಮಕೂರು ಜಿಲ್ಲೆಯಲ್ಲಿ ಕೈಗೊಂಡ ಪ್ರವಾಸದಿಂದಾಗಿ ಜಿಲ್ಲೆಯಲ್ಲಿ ಚಳುವಳಿಯ ಕಾವು ಏರತೊಡಗಿತು ಎಂದರೆ ತಪ್ಪಾಗಲಾರದು. ಅವರ ರಚನಾತ್ಮಕ

ಕಾರ್ಯಕ್ರಮಗಳು ಮತ್ತಷ್ಟು ಪ್ರೇರಣೆ ನೀಡಿದವು ಎಂಬ ಅಂಶ ಸೂರ್ಯನಾಥ ಕಾಮತರವರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಸಂಪುಟ-೨ರಲ್ಲಿ ಉಲ್ಲೇಖಿಸಲಾಗಿದೆ. ಜಿಲ್ಲೆಯ ವಿವಿಧ ಭಾಗಗಳಲ್ಲಿ ಸ್ವಾತಂತ್ರ್ಯ ಹೋರಾಟದ ಘಟನೆಗಳು ನಡೆದವು. ಅವುಗಳಲ್ಲಿ ಮುಖ್ಯವಾಗಿ ಅಸಹಕಾರ ಚಳುವಳಿ, ಗಾಂಧೀಜಿ ಪ್ರವಾಸ, ಕಾನೂನುಭಂಗ ಚಳುವಳಿ, ಕ್ವಿಟ್ ಇಂಡಿಯಾ ಚಳುವಳಿ ಹಾಗೂ ಮೈಸೂರು ಚಲೋ ಚಳುವಳಿಗಳ ಕುರಿತಾದ ಕೃತಿಗಳನ್ನು ವಿಶ್ಲೇಷಿಸಲಾಗಿದೆ.

ಷೇಕ್‌ಅಲಿರವರ ಪ್ರಧಾನ ಸಂಪಾದಕತ್ವದಲ್ಲಿ ಎಸ್.ಚಂದ್ರಶೇಖರ್ ಸಂಪಾದನ 'ಕರ್ನಾಟಕ ಚರಿತ್ರೆ' ಸಂಪುಟ-೭ರಲ್ಲಿ ಕರ್ನಾಟಕದ ಸ್ವಾತಂತ್ರ್ಯ ಚಳುವಳಿಯ ಬಗ್ಗೆ ವಿವರಿಸಲಾಗಿದೆ. ಎಸ್. ಚಂದ್ರಶೇಖರ್ ರವರು ಇದರಲ್ಲಿ ಸ್ವಾತಂತ್ರ್ಯ ಚಳುವಳಿಯ ಅಧ್ಯಾಯಗಳು, ರಾಷ್ಟ್ರೀಯತೆಯ ಉಗಮ, ಸಮಾಜ ಸುಧಾರಣಾ ಚಳುವಳಿ ಬಗ್ಗೆ ಉಲ್ಲೇಖಿಸಿದ್ದಾರೆ. ಕರ್ನಾಟಕದಲ್ಲಿ ವಿದ್ಯಾರ್ಥಿಗಳು ಮಹಿಳೆಯರು ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಬಗ್ಗೆ ಇದೇ ಕೃತಿಯಲ್ಲಿ ಜಮುನರವರ ಲೇಖನದಿಂದ ತಿಳಿಯುತ್ತದೆ. ರೈತರು ವಹಿಸಿದ ಪಾತ್ರದ ಬಗ್ಗೆ ಎಸ್.ಚಂದ್ರಶೇಖರ್ ಲೇಖನ ಬರೆದಿದ್ದಾರೆ. ಕರ್ನಾಟಕದಲ್ಲಿ ನಡೆದ ಸ್ವಾತಂತ್ರ್ಯ ಚಳುವಳಿಯ ಸೈದ್ಧಾಂತಿಕ ವಿವರಣೆ ಈ ಕೃತಿಯಲ್ಲಿ ಅಡಗಿದೆ.

ರಾಷ್ಟ್ರೀಯ ಕಾಂಗ್ರೇಸ್ ಅಧಿವೇಶನ ೧೯೨೪ರಲ್ಲಿ ಬೆಳಗಾವಿಯಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಇದೇ ಸಮಯದಲ್ಲಿ ಎನ್.ಎಸ್.ಹರ್ಡೀಕರ್ ಹಿಂದೂಸ್ಥಾನಿ ಸೇವಾದಳವನ್ನು ಸ್ಥಾಪಿಸಿದರು[೧೪] ಎಂದು ಶ್ರೀನಿವಾಸಯ್ಯರವರ ಎನ್.ಎಸ್.ಹರ್ಡೀಕರ್ ಕೃತಿಯಿಂದ ತಿಳಿಯುತ್ತದೆ. ಗಾಂಧೀಜಿಯವರ ಪ್ರಭಾವಕ್ಕೆ ಒಳಗಾದ ತಗಡೂರು ರಾಮಚಂದ್ರರಾಯರು ''ಹರಿಜನ ಸತ್ಯಾಗ್ರಹ' ಪ್ರಾರಂಭಿಸಿದರು. ಇಂತಹ ಕಾರ್ಯಚಟುವಟಿಕೆಗಳಿಂದ ಪ್ರಭಾವಿತರಾದ ಮೈಸೂರು ಸಂಸ್ಥಾನದ ಜನತೆ ರಾಜಕೀಯದ ಕಡೆ ಆಕರ್ಷಿತರಾಗಿ ಹೆಚ್ಚು ಹೆಚ್ಚು ಚಳುವಳಿಯಲ್ಲಿ ಭಾಗವಹಿಸ ತೊಡಗಿದರು. ಇದಕ್ಕಿಂತ ಮುಂಚಿತವಾಗಿ ಜನತೆ ಸ್ವಲ್ಪಮಟ್ಟಿಗೆ ರಾಷ್ಟ್ರೀಯ ವಿಚಾರಗಳ ಬಗ್ಗೆ ಆಸಕ್ತಿ ತೋರದಿರುವುದು ಕಂಡುಬರುತ್ತದೆ. ತುಮಕೂರು ಜಿಲ್ಲೆಯಲ್ಲಿ ಕೆ.ರಂಗೈಯ್ಯಂಗಾರ್ ಮತ್ತು ತಾಳಕೆರೆ ಸುಬ್ರಹ್ಮಣ್ಯಂ ರವರು ರಾಜಕೀಯ ಮತ್ತು ರಾಷ್ಟ್ರೀಯ ಪ್ರಜ್ಞೆಯ ಕಾರಂಜಿಯಂತಿದ್ದರು[೧೫] ಎಂದು ಸೂರ್ಯನಾಥ ಕಾಮತ್‌ರವರ 'ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು', ಸಂಪುಟ-೨ರಲ್ಲಿ ಉಲ್ಲೇಖಿತವಾಗಿದೆ.

## ನಾಗರಿಕ ಕಾನೂನುಭಂಗ ಚಳುವಳಿ

ಬ್ರಿಟಿಷರು ಭಾರತದಲ್ಲಿ ಉಪ್ಪಿನ ಕಾಯಿದೆ ಜಾರಿಮಾಡಿ ಭಾರತೀಯರ ಜೀವನಾವಶ್ಯಕ ವಸ್ತು ಉಪ್ಪಿನ ಮೇಲೆ ಅಧಿಕ ತೆರಿಗೆ ವಿಧಿಸಿದರು. ಇದರಿಂದ ಗಾಂಧೀಜಿ ೧೯೩೦ರಲ್ಲಿ ನಾಗರಿಕ ಕಾನೂನುಭಂಗ ಚಳುವಳಿಗೆ ಕರೆ ನೀಡಿದರು. ಇದಕ್ಕೆ ರಾಷ್ಟ್ರವ್ಯಾಪಿ ಬೆಂಬಲ ವ್ಯಕ್ತವಾಯಿತು. ಕರ್ನಾಟಕದಲ್ಲೂ ಈ ಚಳುವಳಿ ನಡೆಯಿತು. ಬೆಂಗಳೂರು, ತುಮಕೂರು, ಮೈಸೂರುಗಳಲ್ಲಿ ರಾಷ್ಟ್ರಧ್ವಜ ಹಾರಿಸಿ ೨೬-೧-

೧೯೩೦ನ್ನು ಸ್ವಾತಂತ್ರ್ಯ ದಿನವೆಂದು ಆಚರಿಸಲಾಯಿತು ಎಂಬುದಾಗಿ ಎಚ್.ಎಸ್.ಗೋಪಾಲರಾವ್ ರವರ 'ನಮ್ಮನಾಡು ಕರ್ನಾಟಕ' ಕೃತಿಯಲ್ಲಿ ತಿಳಿಸಿದ್ದಾರೆ.[೧೬]

ಇಡೀ ಮೈಸೂರು ಸಂಸ್ಥಾನದಲ್ಲಿಯೇ ಮೊದಲ ಬಾರಿಗೆ ತುಮಕೂರು ಜಿಲ್ಲೆಯಲ್ಲಿ "ಪಾನ ನಿರೋಧ" ಚಳುವಳಿ ೧೯೩೧ರಲ್ಲಿ ನಡೆಯಿತು. ಕೆ.ರಂಗೈಯ್ಯಂಗಾರ್ ಮತ್ತು ತಾಳಕೆರೆ ಸುಬ್ರಮಣ್ಯಂ ಇದರ ನೇತೃತ್ವ ವಹಿಸಿದ್ದರು. ಹೆಂಡದ ಅಂಗಡಿ ಮುಂದೆ ಪಿಕೇಟಿಂಗ್ ನಡೆಸಲಾಯಿತೆಂದು ಸೂರ್ಯನಾಥ ಕಾಮತ್ ಕೃತಿಯಲ್ಲಿ ತಿಳಿಸಿದ್ದಾರೆ.[೧೭] ಟಿ.ಎಸ್.ವಿಶ್ವೇಶ್ವರಯ್ಯನವರ 'ಸ್ವಾತಂತ್ರ್ಯ ಸೇನಾನಿ ತಾಳಕೆರೆ ಸುಬ್ರಹ್ಮಣ್ಯಂ' ಕೃತಿಯಲ್ಲಿ ಇದೇ ಅಂಶ ವ್ಯಕ್ತವಾಗಿದೆ. ರೈತರು ಕಂದಾಯವನ್ನು ಕೊಡಲು ನಿರಾಕರಿಸಿದರು. ಇದರಿಂದ ಬ್ರಿಟಿಷರ ಆಡಳಿತಕ್ಕೆ ಅಡೆ ತಡೆಗಳಾದವು. ಈ ಅವಧಿಯಲ್ಲಿ ಆರ್ಥಿಕ ಮಟ್ಟ ಕುಸಿದು ರೈತರು ಭೂಕಂದಾಯವನ್ನು ಹೊರಲಾರದೆ ಹೋದರು ಎಂದು ಕೆ.ವೀರತಪ್ಪ ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.[೧೮] ಚಳುವಳಿಯಲ್ಲಿ ಪಾಲ್ಗೊಂಡ ಕ್ರಾಂತಿಕಾರಿಗಳನ್ನು ನಿಗ್ರಹಿಸುವಂತೆ ಬ್ರಿಟಿಷ್ ಸರ್ಕಾರ ಮೈಸೂರು ಒಡೆಯರ ಮೇಲೆ ಒತ್ತಡ ತಂದು ಕರಾಳ ಕಾನೂನನ್ನು ಜಾರಿಗೆ ತಂದರು ಎಂದು ಸೂರ್ಯನಾಥ ಕಾಮತ್ ಉಲ್ಲೇಖಿಸಿದ್ದಾರೆ.[೧೯] ಇದರಿಂದ ಪ್ರಜಾಪ್ರತಿನಿಧಿ ಸಭೆಗಳು, ಸರ್ಕಾರವನ್ನು ಮತ್ತಷ್ಟು ಟೀಕೆ ಮಾಡಲಾರಂಬಿಸಿದ್ದಲ್ಲದೆ ಸರ್ಕಾರದ ಬಗ್ಗೆ ಜನರು ಹೊಂದಿದ್ದ ಗೌರವಗಳು ಕಳೆದು ಹೋದವು ಎಂದು ಕೆ.ವೀರತಪ್ಪ ಹೇಳುತ್ತಾರೆ. ೧೯೩೨ರಲ್ಲಿ ಕರ ನಿರಾಕರಣೆ ಚಳುವಳಿ ಕಾರವಾರದಲ್ಲಿ ನಡೆದಿರಲು ಅಲ್ಲಿಗೆ ತುಮಕೂರು ಜಿಲ್ಲೆಯಿಂದಲೇ ಬುಲೆಟಿನ್‌ಗಳನ್ನು ಸೈಕ್ಲೋಸ್ಟೈಲ್ ಮಾಡಿ ಕಳುಹಿಸಿ ಕೊಡಲಾಗುತ್ತಿತ್ತು ಎಂದು ಸೂರ್ಯನಾಥ ಕಾಮತ್ ಹೇಳಿದ್ದಾರೆ.

೧೯೩೦-೩೪ರ ಅವಧಿಯಲ್ಲಿ ಜಿಲ್ಲೆಯಲ್ಲಿ ಗ್ರಾಮಸ್ವರಾಜ್ಯ, ಖಾದಿ ಪ್ರಚಾರ, ಹರಿಜನೋದ್ಧಾರ ಹಿಂದಿ ಪ್ರಚಾರ, ಹಿಂದೂ-ಮುಸ್ಲಿಂ ಐಕ್ಯತೆ ಮುಂತಾದ ಗಾಂಧೀಜಿಯವರ ರಚನಾತ್ಮಕ ಚಟುವಟಿಕೆಗಳ ಬಗ್ಗೆ ಪ್ರಚಾರ ನಡೆದವು. ಜಿಲ್ಲೆಯಲ್ಲಿ ನಡೆದ ಅರಣ್ಯ ಸತ್ಯಾಗ್ರಹವು ಪಾನ ನಿರೋಧ ಚಳುವಳಿಯ ಒಂದು ಭಾಗವಾಗಿತ್ತು. ಸರ್ಕಾರಿ ಮೀಸಲು ಅರಣ್ಯಗಳಿಗೆ ತೆರಳಿ ಈಚಲು ಮರಗಳನ್ನು ಕಡಿಯುವುದು. ಇದರ ಧ್ಯೇಯವಾಗಿತ್ತು ಎಂದು ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್'ನಲ್ಲಿ ತಿಳಿಸಲಾಗಿದೆ.

ಗಾಂಧೀಜಿಯವರು ಮದ್ಯಪಾನ ಸೇವನೆಯ ಕಡು ವಿರೋಧಿಯಾಗಿದ್ದರು. ಮಧ್ಯಪಾನ ಕಳವಿಗಿಂತ ವ್ಯಭಿಚಾರಕ್ಕಿಂತ ಹೇಯವಾದುದು ಎಂಬ ಅಭಿಪ್ರಾಯ ಹೊಂದಿದ್ದರು. ಇದನ್ನು ಅವರ ರಚನಾತ್ಮಕ ಕಾರ್ಯದಲ್ಲಿ ಒಂದಾಗಿ ಹಮ್ಮಿಕೊಂಡಿದ್ದರು. ತುಮಕೂರು ನಗರಕ್ಕೆ ಅವರು ಭೇಟಿ ನೀಡಿದ್ದಾಗ ಮಕ್ಕಳಿಗೆ ಶಿಕ್ಷಣ ನೀಡಬೇಕು, ಖಾದಿ ಧರಿಸಬೇಕು, ಹೆಂಡ ಕುಡಿಯುವುದು ನಿಲ್ಲಿಸಬೇಕು ಎಂಬುದಾಗಿ ಜನತೆಯನ್ನು ಕುರಿತು ಮಾತನಾಡಿದರು. ಇದರಲ್ಲಿ ದೇಶದ ಭವಿಷ್ಯವನ್ನು ರೂಪಿಸುವಲ್ಲಿ ಅಂದಿನ ಯುವಜನಾಂಗದ

ಪಾತ್ರ ಕುರಿತು ವಿಶ್ಲೇಷಿಸಿರುವುದು ಕಂಡುಬರುತ್ತದೆ. ಇವು ಜನರ ಮನಸ್ಸಿನ ಮೇಲೆ ಪ್ರಭಾವ ಬೀರಿದವು ಎಂದು ಸಿದ್ದವ್ವನಹಳ್ಳಿ ಕೃಷ್ಣಶರ್ಮರವರ 'ಗಾಂಧಿ ಮತ್ತು ಕರ್ನಾಟಕ' ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.[೨೦]

ಈ ರೀತಿಯಾಗಿ ಕಾನೂನುಭಂಗ ಚಳುವಳಿಯ ಭಾಗಗಳಾದ ಕರನಿರಾಕರಣೆ, ಸ್ವದೇಶಿ ವಸ್ತುಗಳ ಬಳಕೆ, ಪಾನ ನಿರೋಧ, ಅರಣ್ಯ ಸತ್ಯಾಗ್ರಹಗಳು ೧೯೪೭ರವರೆಗೂ ಮೈಸೂರು ಸಂಸ್ಥಾನದಲ್ಲಿ ನಡೆದ ಬಗ್ಗೆ ಕೃತಿಗಳಲ್ಲಿ ದಾಖಲಾಗಿದೆ. ೧೯೪೨ರ ಸಂದರ್ಭದಲ್ಲಿ ಮಧ್ಯ ಅಂಗಡಿ ಪಿಕೇಟಿಂಗ್ ಮಧ್ಯದ ಅಂಗಡಿನಾಶ ಇಂತಹ ವಿಧ್ವಂಸಕ ಕೃತ್ಯ ನಡೆದ ಬಗ್ಗೆ ಅಂದಿನ 'ಪೌರವಾಣಿ' ಪತ್ರಿಕೆಯಲ್ಲಿ ಪ್ರಕಟಣೆಗೊಂಡಿತು.[೨೧] ಇದನ್ನು ಗಮನಿಸಿದರೆ ಜನರನ್ನು ಜಾಗೃತಗೊಳಿಸುವಲ್ಲಿ ಅಂದಿನ ಪತ್ರಿಕೆಗಳು ವಹಿಸಿದ ಪಾತ್ರದ ಬಗ್ಗೆ ಮನವರಿಕೆಯಾಗುತ್ತದೆ.

**ಕ್ವಿಟ್ ಇಂಡಿಯಾ ಚಳುವಳಿ**

ಭಾರತದ ಸ್ವಾತಂತ್ರ್ಯ ಚಳುವಳಿಯ ಇತಿಹಾಸದಲ್ಲಿ ಇದು ಮಹತ್ವದ ಹಂತವಾಗಿದೆ. ದ್ವಿತೀಯ ಜಾಗತಿಕ ಸಮರ ನಡೆಯುತ್ತಿದ್ದ ಸಂದರ್ಭದಲ್ಲಿ ಭಾರತಕ್ಕೆ ಕ್ರಿಪ್ಸ್‌ನ ಆಯೋಗ ಬಂದಿತು. ಇದು ಭಾರತೀಯರ ಆಶೋತ್ತರಗಳಿಗೆ ವಿರುದ್ಧವಾಗಿದ್ದರಿಂದ ಅದರ ವಿರುದ್ಧ ತೀವ್ರ ಪ್ರತಿಭಟನೆ ವ್ಯಕ್ತವಾಯಿತು. ಇದೇ ಸಮಯದಲ್ಲಿ ಗಾಂಧೀಜಿಯವರು ಕ್ವಿಟ್ ಇಂಡಿಯಾ ಚಳುವಳಿ ಕೈಗೊಂಡರು. ಕ್ವಿಟ್ ಇಂಡಿಯಾ ಎಂಬ ಎರಡೇ ಪದಗಳಿಂದ ಜನತೆಯನ್ನು ಹುರುದುಂಬಿಸಿದರು. ಈ ವಿಚಾರ ಪ್ರತಿ ಜಿಲ್ಲಾ ಕೇಂದ್ರಗಳಿಗೂ ತಲುಪಿ ಕಾಂಗ್ರೆಸಿಗರು ಈ ಚಳುವಳಿಯನ್ನು ಸ್ವಾಗತಿಸಿದರು. ಗಾಂಧೀಜಿಯವರ 'ಮಾಡು ಇಲ್ಲವೇ ಮಡಿ' ಎಂಬ ಘೋಷಣೆ ಎಲ್ಲ ಕಾಂಗ್ರೆಸಿಗರ ಹೃದಯ ತಟ್ಟಿತು, ವಿದ್ಯಾರ್ಥಿಗಳು ಶಾಲಾ-ಕಾಲೇಜು ಬಹಿಷ್ಕರಿಸಿದರು. ಹರತಾಳಗಳಲ್ಲಿ ಭಾಗವಹಿಸಿದರು. ಬ್ರಿಟಿಷ್ ಸರ್ಕಾರ ಗಾಂಧೀಜಿ, ನೆಹರು ಮುಂತಾದ ರಾಷ್ಟ್ರನಾಯಕರನ್ನು ಬಂಧಿಸಿತು.[೨೨]

ಕೆ.ವೀರತಪ್ಪನವರ 'ರೀಡಿಂಗ್ಸ್ ಇನ್ ಮಾರ್ಡನ್ ಹಿಸ್ಟರಿ ಆಫ್ ಮೈಸೂರ್', ಸೂರ್ಯನಾಥ ಕಾಮತ್‌ರವರ 'ಕ್ವಿಟ್ ಇಂಡಿಯಾ ಮೂವ್‌ಮೆಂಟ್ ಇನ್ ಕರ್ನಾಟಕ', ಮತ್ತು 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಸಂಪುಟ-೨ ಮುಂತಾದವು ಅಧ್ಯಯನಕ್ಕೆ ಸಹಾಯಕವಾಗಿವೆ. ಈ ಕೃತಿಗಳಲ್ಲಿ ಮೈಸೂರು ಸಂಸ್ಥಾನ ಮತ್ತು ಅದರ ಭಾಗವಾದ ತುಮಕೂರು ಪ್ರದೇಶದಲ್ಲಿ ಚಳುವಳಿಯ ಬೆಳವಣಿಗೆ ಕುರಿತು ವಿವರಿಸಲಾಗಿದೆ. ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಮೈಸೂರು ಸ್ಟೇಟ್ ಕಾಂಗ್ರೆಸ್ ಒತ್ತಾಯ ಮಾಡಿದರೂ ಮಹಾರಾಜರು ಅದಕ್ಕೆ ಸ್ಪಂದಿಸಲಿಲ್ಲ. ಈ ಚಳುವಳಿಯಲ್ಲಿ ರೈತರು, ಕಾರ್ಮಿಕರು, ವಿದ್ಯಾರ್ಥಿಗಳು, ಮಹಿಳೆಯರು ಎಲ್ಲ ಸೇರಿ ತೀವ್ರ ಪ್ರತಿಭಟನೆ ನಡೆಸಿದರು. ಸಾಹಿತಿಗಳು ಬೆಂಬಲ ಸೂಚಿಸಿದರು, ಭೂಗತ ಚಟುವಟಿಕೆಗಳು ನಡೆದವು ಎಂದು ಎಚ್.ಎಸ್.ಗೋಪಾಲ ರಾವ್‌ರವರು

'ನಮ್ಮ ನಾಡು ಕರ್ನಾಟಕ' ಕೃತಿಯಲ್ಲಿ ತಿಳಿಸಿದ್ದಾರೆ.[೨೩] ಎಸ್.ಚಂದ್ರಶೇಖರ್ ಅವರ ಸಂಪಾದಕತ್ವದ ಕರ್ನಾಟಕ ಚರಿತ್ರೆ ಸಂಪುಟ-೭ರಲ್ಲಿ ಇದೇ ಅಂಶ ವ್ಯಕ್ತವಾಗಿದೆ.

ಮೈಸೂರು ಸಂಸ್ಥಾನದ ಮೈಸೂರು, ತುಮಕೂರು, ಬೆಂಗಳೂರು ಮುಂತಾದ ನಗರಗಳಲ್ಲಿ ಹರತಾಳ, ಸಭೆ ಮೆರವಣಿಗೆಗಳು ನಡೆದವು. ಜನಪದ ಜಿಲ್ಲೆಯಾದ ತುಮಕೂರಿನ ಜನತೆ ಸಕ್ರಿಯವಾಗಿ ಭಾಗವಹಿಸಿ ತೀವ್ರ ಹೋರಾಟ ನಡೆಸಿದರು. ಸರ್ಕಾರಿ ಕಟ್ಟಡಗಳ ಧ್ವಂದ್ವ, ಕಟ್ಟಡಗಳ ಮೇಲೆ ಧ್ವಜ ಹಾರಿಸುವುದು ಮಧ್ಯದ ಅಂಗಡಿಗಳ ಪಿಕೆಟಿಂಗ್, ರೈಲ್ವೆ ಹಳಿಗಳ ನಾಶ, ಅಂಚೆ-ತಂತಿ ಕಛೇರಿಗಳ ಧ್ವಂಸ ಮುಂತಾದ ವಿಧ್ವಂಸಕ ಕೃತ್ಯಗಳು ನಡೆದವು[೨೪] ಎಂಬ ಅಂಶ ಡಿ.ಎನ್.ಯೋಗೀಶ್‌ರವರ 'ಜಯಮಂಗಲಿ' ಸ್ಮರಣ ಸಂಚಿಕೆ'ಯಲ್ಲಿ ವ್ಯಕ್ತವಾಗಿದೆ. ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್' ಇದನ್ನೆ ಪುಷ್ಟೀಕರಿಸುತ್ತದೆ. ಮಧುಗಿರಿ, ಕೊರಟಗೆರೆ, ತಿಪಟೂರು, ಗುಬ್ಬಿ, ಚಿಕ್ಕನಾಯಕನಹಳ್ಳಿಗಳಲ್ಲಿ ಚಳುವಳಿ ವ್ಯಾಪಕವಾಯಿತು. ಕ್ಯಾತಸಂದ್ರದಲ್ಲಿ ಗೂಡ್ಸ್ ರೈಲನ್ನು ಉರುಳಿಸಲಾಯಿತು. ತಿಪಟೂರಿನಲ್ಲಿ ಸೋಮೇಗೌಡ ಎಂಬ ವಿದ್ಯಾರ್ಥಿ ಮುಖಂಡತ್ವದಲ್ಲಿ ರೈಲು ಬೋಗಿಗಳನ್ನು ಸುಟ್ಟು ಹಾಕಿದರು, ಇವರ ದಸ್ತಗಿರಿಯಾಯಿತು. ಮಧುಗಿರಿ ಸುತ್ತಲೂ ಮಾಲಿಮರಿಯಪ್ಪ ಮತ್ತು ಕೆ.ಹೆಂಜೇರಪ್ಪ ಧ್ವಜಾರೋಹಣ, ಪಿಕೆಟಿಂಗ್ ನಡೆಸಿದರು. ಅವರಿಬ್ಬರನ್ನು ಬಂಧಿಸಲಾಯಿತು ಎಂದು ಮಾಲಿಮುದ್ದಣ್ಣ ತಿಳಿಸಿದ್ದಾರೆ.[೨೫] ಮಧುಗಿರಿಯಲ್ಲಿ ಎಂ.ಜಿ.ನಾರಾಯಣರಾವ್ ತಮ್ಮ ಸ್ನೇಹಿತರೊಂದಿಗೆ ಸೇರಿ ಮಧ್ಯದ ಅಂಗಡಿ ಪಿಕೆಟಿಂಗ್ ಮಾಡಿದ್ದರಿಂದ ಅವರನ್ನು ಬಂಧಿಸಲಾಯಿತು ಎಂದು ಸೂರ್ಯನಾಥ ಕಾಮತ್ ತಿಳಿಸಿದ್ದಾರೆ.[೨೬] ಎಚ್.ಎಸ್. ದೊರೆಸ್ವಾಮಿಯವರು 'ಹೋರಾಟದ ದಿಟ್ಟ ಹೆಜ್ಜೆಗಳು' ಎಂಬ ಕೃತಿಯಲ್ಲಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಪ್ರಾಣಾರ್ಪಣೆ ಮಾಡಿದವರ ಬಗ್ಗೆ ಉಲ್ಲೇಖಿಸಿದ್ದಾರೆ.

ತುಮಕೂರು ನಗರದಲ್ಲಿ ಆಗಸ್ಟ್ ೧೫ ರಂದು ಸಾರ್ವಜನಿಕ ಮೆರವಣಿಗೆ ನಡೆಯಿತು. ಇದರಲ್ಲಿ ವಿದ್ಯಾರ್ಥಿಗಳು, ಕಾರ್ಮಿಕರು, ಸರ್ಕಾರಿ ನೌಕರರು, ಮಹಿಳೆಯರು ಮುಂತಾದವರು ಭಾಗವಹಿಸಿದ್ದರು. ಮಹಾತ್ಮ ಗಾಂಧೀಜಿ ಕೀ ಜೈ, ಬ್ರಿಟೀಷರೇ ಭಾರತ ಬಿಟ್ಟು ತೊಲಗಿ ಎಂದು ಘೋಷಣೆಗಳಿಂದ ಮೆರವಣಿಗೆ ಹೊರಟರು ಇದರಲ್ಲಿ ಎಂ.ವಿ.ರಾಮರಾವ್, ವಿಠೋಬ, ಬೀಮಯ್ಯ ಮುಂತಾದವರು ಭಾಗವಹಿಸಿದ್ದರು ಎಂದು ಕೆ.ವೀರತಪ್ಪ ತಿಳಿಸಿದ್ದಾರೆ.[೨೭]

ಗಾಂಧೀಜಿಯವರ ಈ ನಿರ್ಣಾಯಕ ಹೋರಾಟಕ್ಕೆ ದೇಶಾದ್ಯಂತ ವ್ಯಾಪಕ ಬೆಂಬಲ ದೊರೆಯಿತು. ಗಾಂಧೀಜಿ ಅಹಿಂಸಾತ್ಮಕ ಹೋರಾಟಕ್ಕೆ ಕರೆಕೊಟ್ಟಿದ್ದರು. ಆದರೆ ಅನೇಕ ಭೀಕರ ಕೃತ್ಯಗಳು ನಡೆದು ೧೯೪೪ರಲ್ಲಿ ಈ ಚಳುವಳಿಯನ್ನು ಹಿಂತೆಗೆದುಕೊಂಡರು ಎಂದು ಎಚ್.ವಿ.ಶ್ರೀನಿವಾಸಮೂರ್ತಿ ಮತ್ತು ಆರ್.ರಾಮಕೃಷ್ಣರವರು ತಿಳಿಸಿದ್ದಾರೆ.[೨೮] ಅಂತಿಮವಾಗಿ ೧೯೪೭ರಲ್ಲಿ ಭಾರತಕ್ಕೆ ಲಭಿಸುವುದರೊಂದಿಗೆ ಸ್ವಾತಂತ್ರ್ಯ ಚಳುವಳಿ ಅಂತ್ಯಕಂಡಿತು.

## ಮೈಸೂರು ಚಲೋ ಚಳುವಳಿ

ಭಾರತಕ್ಕೆ ಸ್ವಾತಂತ್ರ್ಯ ದೊರೆತ ಸಂದರ್ಭದಲ್ಲಿ ಮೈಸೂರು ಸಂಸ್ಥಾನದಲ್ಲಿ ಮೈಸೂರು ಚಲೋ (ಅರಮನೆ ಸತ್ಯಾಗ್ರಹ) ನಡೆಯಿತು. ಇದರ ಉದ್ದೇಶ ಜವಾಬ್ದಾರಿ ಸರ್ಕಾರದ ರಚನೆಯಾಗಿತ್ತು. ೧೯೪೭ರಲ್ಲಿ ಭಾರತ ಸ್ವಾತಂತ್ರ್ಯಗೊಂಡು ಪ್ರಜಾತಂತ್ರ ವ್ಯವಸ್ಥೆ ರೂಪುಗೊಂಡಿತು. ಆದರೆ ಅದರ ಭಾಗವಾಗಿದ್ದ ಮೈಸೂರು ಸಂಸ್ಥಾನ ಮಹಾರಾಜರ ಅಧೀನದಲ್ಲಿತ್ತು. ಇದರಿಂದ ಪ್ರಜಾತಂತ್ರ ವ್ಯವಸ್ಥೆ ಹೊಂದಿದ ಜವಾಬ್ದಾರಿ ಸರ್ಕಾರದ ಸ್ಥಾಪನೆಯ ದೃಷ್ಟಿಕೋನದಿಂದ ನಡೆದ ಹೋರಾಟವೇ ಮೈಸೂರು ಚಲೋ, ಮೈಸೂರು ಸಂಸ್ಥಾನಕ್ಕೆ ಒಳಪಟ್ಟ ಎಲ್ಲ ಭಾಗದ ಜನತೆ ಇದಕ್ಕೆ ಸ್ಪಂದಿಸಿರುವುದು ತಿಳಿದುಬರುತ್ತದೆ.

ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರ ರಚನೆಯಾಗಬೇಕೆಂದು ಒತ್ತಾಯಿಸಿ ಮತ್ತೆ ಬೆಂಗಳೂರಿನ ಸುಭಾಷ್ ನಗರದಲ್ಲಿ ಅಧಿವೇಶನ ನಡೆಯಿತು. ನಂತರ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಬೌರಿಂಗ್ ಪೇಟೆಯಲ್ಲಿ ಸಭೆ ನಡೆಸಿ ಮೈಸೂರು ಚಲೋ ಅಥವಾ ಅರಮನೆ ಸತ್ಯಾಗ್ರಹಕ್ಕೆ ಕರೆ ಕೊಡಲು ತೀರ್ಮಾನ ಮಾಡಿತು ಎಂದು ತಿರುಮಲೆ ಶ್ರೀರಂಗಾಚಾರ್ಯರವರ ಲೇಖನದಿಂದ ತಿಳಿಯುತ್ತದೆ.[೨೯] ತುಮಕೂರು ಜಿಲ್ಲೆಯಲ್ಲಿ ಈ ಹೋರಾಟಕ್ಕೆ ವ್ಯಾಪಕ ಬೆಂಬಲ ವ್ಯಕ್ತವಾಯಿತು. ಮೈಸೂರು ಕಾಂಗ್ರೆಸ್ ಅಧ್ಯಕ್ಷರಾದ ಕೆ.ಸಿ.ರೆಡ್ಡಿಯವರು ಸೆಪ್ಟೆಂಬರ್ ೧ ರಂದು ಮೈಸೂರು ಚಲೋ ಚಳುವಳಿಯನ್ನು ಘೋಷಿಸಿ ಸೆಪ್ಟೆಂಬರ್ ೪ ರಂದು ಜಾಥ ಹೊರಡಬೇಕೆಂದು ತಿಳಿಸಿದರು.[೩೦] ಎಂದು ಗೆಜೆಟಿಯರ್ ನಲ್ಲಿ ತಿಳಿಸಲಾಗಿದೆ. ಡಿ.ಎನ್.ಯೋಗೀಶ್ ಸಂಪಾದನದ 'ಜಯಮಂಗಲಿ' ಸ್ಮರಣ ಸಂಚಿಕೆಯಲ್ಲಿನ ಎಸ್.ನಾಗರತ್ನಮ್ಮನವರ ಲೇಖನದಲ್ಲಿ ಇದೇ ಅಂಶ ವ್ಯಕ್ತವಾಗಿದೆ. ಮೈಸೂರು ಒಡೆಯರಿಂದ ಅಧಿಕಾರ ಹಸ್ತಾಂತರಗೊಂಡು ಪ್ರಜಾಪ್ರತಿನಿಧಿ ಸರ್ಕಾರ ರಚನೆಯಾಗಬೇಕೆಂಬುದು ಈ ಚಳುವಳಿಯ ಆಶಯವಾಗಿತ್ತು. ಸಂಸ್ಥಾನದಲ್ಲಿ ಪಕ್ಷಭೇದವಿಲ್ಲದೆ ಹೋರಾಟ ನಡೆಯಿತು. ವಿದ್ಯಾರ್ಥಿಗಳು, ಕಾರ್ಮಿಕರು, ಸಾಹಿತಿಗಳು ಸಕ್ರಿಯವಾಗಿ ಭಾಗವಹಿಸಿದರು ಎಂದು ಎಚ್.ಎಸ್.ಗೋಪಾಲರಾವ್ ತಿಳಿಸಿದ್ದಾರೆ.[೩೧]

ತುಮಕೂರು, ಗುಬ್ಬಿ ಕುಣಿಗಲ್, ಮಧುಗಿರಿ, ಚಿಕ್ಕನಾಯಕಹಳ್ಳಿ, ಕೊರಟಗೆರೆ, ತಿಪಟೂರುಗಳಲ್ಲಿ ವಿದ್ಯಾರ್ಥಿಗಳು ಹೆಂಡದ ಅಂಗಡಿ ಪಿಕೆಟಿಂಗ್, ಟಿಕೆಟ್ ರಹಿತ ರೈಲು ಪ್ರಯಾಣ ಮಾಡಿದರು. ಆರ್. ಎಸ್.ಆರಾಧ್ಯ ಪೌರವಾಣಿ, ಪೌರವೀರ ಪತ್ರಿಕೆಗಳನ್ನು ನಿರ್ಭಯವಾಗಿ ಹಂಚಿ ನಿಷೇಧಾಜ್ಞೆಗಳನ್ನು ಮುರಿದರು ಎಂಬ ಅಂಶ ಡಿ.ಎನ್.ಯೋಗೀಶ್‌ರವರ 'ಜಯಮಂಗಲಿ' ಸ್ಮರಣ ಸಂಚಿಕೆಯಲ್ಲಿ ಉಲ್ಲೇಖಿತವಾಗಿದೆ.[೩೨] ದಿನಾಂಕ ೧೪-೯-೧೯೪೭ನೇ ದಿನ ಮೈಸೂರು ಚರಿತ್ರೆಯಲ್ಲಿ ಕರಾಳ ದಿನ ಆ ದಿನ ಮೈಸೂರು ಸಂಸ್ಥಾನದ ಹಲವು ಕಡೆ ಗೋಲಿಬಾರ್ ನಡೆದು ನಿರಪರಾಧಿಗಳು ಮಡಿದರು. ತುಮಕೂರು ಅಂದು ರಕ್ತದ ಮಡುವಿನಲ್ಲಿ ತೊಯ್ದು ಹೋಯಿತು. ಖ್ಯಾತ ಸಾಹಿತಿ ಗೊರೂರು

ರಾಮಸ್ವಾಮಿ ಐಯ್ಯಂಗಾರ್ ರವರ ಪುತ್ರ ರಾಮಚಂದ್ರ ಪೋಲಿಸರ ಗುಂಡಿಗೆ ಬಲಿಯಾದ ಎಂದು ಸಿ.ಎನ್ .ಬಾಸ್ಕರಪ್ಪರವರ ಸಂಪಾದನದ 'ತುಮಕೂರು ಜಿಲ್ಲಾದರ್ಶನ'ದಲ್ಲಿ ಉಲ್ಲೇಖಿಸಲಾಗಿದೆ.[೩೩] ಸೂರ್ಯನಾಥ ಕಾಮತ್‌ರವರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಸಂಪುಟ-೨ರಲ್ಲಿ ಇದೇ ಅಂಶ ವ್ಯಕ್ತವಾಗಿದೆ.

ತುಮಕೂರು ವಕೀಲರ ಸಂಘವು ಬೇಜವಾಬ್ದಾರಿ ಸರ್ಕಾರದಲ್ಲಿ ವಾದಿಸುವುದಿಲ್ಲ ಎಂದು ಪಿಕೆಟಿಂಗ್ ನಡೆಸಿತು. ಇದರಲ್ಲಿ ಬಾಗೀರಥಮ್ಮ, ಸುಶೀಲಮ್ಮಸುಬ್ರಹ್ಮಣ್ಯಂ ಭಾಗವಹಸಿದ್ದರು. ಅಂದರೆ ಮಹಿಳೆಯರು ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರೆಂಬ ಅಂಶ ಎಸ್.ನಾಗರತ್ನಮ್ಮನವರ 'ಜಯಮಂಗಲಿ ಸ್ಮರಣ ಸಂಚಿಕೆ'ಯ ಲೇಖನದಲ್ಲಿ ತಿಳಿಸಲಾಗಿದೆ. ಈ ವೇಳೆಗೆ ದಿವಾನ್ ಮಾಧವ ರಾಯರು ನಿವೃತ್ತರಾಗಿ ಮಹಾರಾಜರಿಂದ ಮದರಾಸಿನ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ನೇಮಕವಾಗುತ್ತಾರೆ. ಅವರು ಚಳುವಳಿಗೆ ವಿರುದ್ಧವಾಗಿದ್ದರಿಂದ 'ಆರ್ಕಾಟ್ ಬಾಯ್ಕಾಟ್', 'ಚಲೋ ಮೈಸೂರು' ಎಂಬ ಘೋಷಣೆಗಳು, ಮೆರವಣಿಗೆಳು ನಾಡಿನಾದ್ಯಂತ ನಡೆದವು ಎಂದು ಕೆ.ವೀರತಪ್ಪನವರು ತಿಳಿಸುತ್ತಾರೆ.[೩೪]

ಈ ಘಟನೆಯು ಚರಿತ್ರೆಯಲ್ಲಿ ಹೆಚ್ಚಿನ ಮಹತ್ವ ಹೊಂದಿಲ್ಲವಾದರೂ ಮೈಸೂರು ಸಂಸ್ಥಾನದಲ್ಲಿ ರಾಜ ಪ್ರಭುತ್ವ ಕೊನೆಗೊಂಡು ಪ್ರಜಾಪ್ರಭುತ್ವದ ಪ್ರತಿನಿಧಿ ಸರ್ಕಾರ ಸ್ಥಾಪನೆಯಾಯಿತು. ಸಂಸ್ಥಾನವು ಭಾರತದ ಒಕ್ಕೂಟ ಸೇರಲು ಮತ್ತು ಕನ್ನಡಿಗರ ರಾಜ್ಯ ರಚನೆಯಾಗಲು ಸ್ಫೂರ್ತಿ ನೀಡಿತು.

೧೯೪೭ ಅಕ್ಟೋಬರ್ ೨೪ ರಂದು ಜನಪ್ರಿಯ ಸರ್ಕಾರ ರಚನೆಯಾಗಿ ಮೈಸೂರು ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೈಸೂರು ರಾಜ್ಯದ ನೂತನ ಮಂತ್ರಿಗಳ ಹೆಸರುಗಳು ಪ್ರಕಟಗೊಂಡವು. ಕೆ.ಸಿ.ರೆಡ್ಡಿಯವರು ಮೈಸೂರು ರಾಜ್ಯಕ್ಕೆ ಪ್ರಥಮ ಮುಖ್ಯಮಂತ್ರಿಗಳಾಗಿ ಆಯ್ಕೆಗೊಂಡರು. ಈ ವೇಳೆಗೆ ಭಾರತದಲ್ಲಿ ಬ್ರಿಟಿಷರ ಅಧಿಪತ್ಯ ಕೊನೆಗೊಂಡಿತ್ತು. ತುಮಕೂರು ಪ್ರದೇಶದಲ್ಲಿ ವಸಹಾತುಶಾಹಿಗಳ ಚರಿತ್ರೆಯೂ ಮುಕ್ತಾಯಗೊಂಡಿತ್ತು.

೧೯೬೮ರಲ್ಲಿ 'ಹಿಸ್ಟರಿ ಆಫ್ ಫ್ರೀಡಂ ಸ್ಟ್ರಗಲ್ ಇನ್ ಪ್ರಿನ್ಸ್ಲಿ ಸ್ಟೇಟ್ಸ್' ಎಂಬ ಪ್ರಬಂಧದಲ್ಲಿ ಆರ್ .ಎಲ್ .ಹಂಡ ಭಾರತದ ಸ್ವಾತಂತ್ರ್ಯ ಚಳುವಳಿ ಬಗೆಗಿನ ವಿಸ್ತೃತವಾದ ಅಧ್ಯಯನ ಅಗತ್ಯವಾಗಿದ್ದರೂ ದುರಾದೃಷ್ಟವಶಾತ್ ಅದು ಬಂದಿಲ್ಲ; ಅಷ್ಟೆ ಅಲ್ಲದೆ ದೇಶಿಯ ಸಂಸ್ಥಾನಗಳ ರಾಷ್ಟ್ರೀಯತಾ ಕಥನವನ್ನು ಒಳಗೊಳ್ಳದೇ ಅಧ್ಯಯನವು ದೋಷಪೂರಿತವಾದುದು ಎಂಬ ಅಭಿಪ್ರಾಯ ಸೂಚಿಸಿದ್ದಾರೆ.[೩೫] ದಕ್ಷಿಣ ಭಾರತವನ್ನು ಕುರಿತು ಅಲ್ಲಿನ ರಾಜಸಂಸ್ಥಾನಗಳನ್ನು ಕುರಿತು ಹೆಚ್ಚು ಅಧ್ಯಯನವಾಗಿಲ್ಲ ಎಂದೇ ಹೇಳಬೇಕು. ವಾಸ್ತವವಾಗಿ ಬ್ರಿಟಿಷ್ ವಸಾಹತೀಕರಣ ಮತ್ತು ರಾಜರುಗಳ ಸರ್ವಾಧಿಕಾರ ಎಂಬ ದುಪ್ಪಟ್ಟು ಹೊರೆಗಳನ್ನು ಹೊತ್ತಿದ್ದ ಸ್ಥಳೀಯ ರಾಜ್ಯಗಳ ರಾಷ್ಟ್ರೀಯತಾ ಚಳುವಳಿಯನ್ನು ಕುರಿತು ಅಧ್ಯಯನ ಮಾಡುವಾಗ ಸಂಶೋಧಕ ಗಂಭೀರ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ.

ಮೈಸೂರು ಸಂಸ್ಥಾನದಲ್ಲಿ ರಾಷ್ಟ್ರೀಯತೆಯ ಹುಟ್ಟು ಮತ್ತು ಅದಕ್ಕೆ ಕೊಡುಗೆ ನೀಡಿದ ಅಂಶಗಳನ್ನು ಎಸ್.ಚಂದ್ರಶೇಖರ್ ತಮ್ಮ ಕೃತಿ 'ಆಧುನಿಕ ಕರ್ನಾಟಕದ ಆಂದೋಲನ'ಗಳಲ್ಲಿ ಸ್ಪಷ್ಟವಾಗಿ ತಿಳಿಸುವ ಪ್ರಯತ್ನ ನಡೆಸಿದ್ದಾರೆ. ವಸಾಹತುಶಾಹಿ ಅವಧಿಯಲ್ಲಿ ಮೈಸೂರನ್ನು ಬಹಳ ಹೆಗ್ಗಳಿಕೆಯಿಂದ ಮಾದರಿ ಸಂಸ್ಥಾನ ಎಂದು ಕರೆದರೂ ವಸಾಹತುಶಾಹಿ ಮತ್ತು ರಾಷ್ಟ್ರೀಯತಾ ಚಳುವಳಿಯ ಅವಳಿ ಪ್ರಕ್ರಿಯೆಗೆ ಅದು ತೋರಿದ ಪ್ರತಿಕ್ರಿಯೆ ಭಿನ್ನವಾಗಿತ್ತು. ಇಲ್ಲಿ ವಸಾಹತುಶಾಹಿಯ ಪ್ರಭಾವ ಪರೋಕ್ಷ ವಾಗಿತ್ತು. ಅದು ದೇಶಿ ಆಡಳಿತವನ್ನು ನಿಯಂತ್ರಿಸುವ ಮೂಲಕ ತನ್ನ ಇಷ್ಟಾರ್ಥಗಳನ್ನು ಈಡೇರಿಸಿ ಕೊಳ್ಳುತ್ತಿತ್ತು. ರಾಷ್ಟ್ರೀಯತೆ ಉಗಮವೂ ಇಂಥ ಸನ್ನಿವೇಶದಲ್ಲಿಯೇ ಆಗಬೇಕಿತ್ತು.[೩೬]

ವಸಾಹತುಶಾಹಿ ಅವಧಿಯಲ್ಲಿ ಬ್ರಿಟಿಷರ ದಬ್ಬಾಳಿಕೆ, ದುರಾಡಳಿತ, ಶೋಷಣೆಗಳಿಂದ ಬಿಡುಗಡೆ ಹೊಂದಲು ಜನತೆ ನಡೆಸಿದ ಸತತ ಪ್ರಯತ್ನಗಳು, ರಾಷ್ಟ್ರೀಯ ನಾಯಕರ ತತ್ವ ಮತ್ತು ಸಿದ್ಧಾಂತಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಮೈಸೂರು ಸಂಸ್ಥಾನದಲ್ಲಿ ಜನತೆ ಬ್ರಿಟಿಷ್ ಅಧಿಪತ್ಯ ಮತ್ತು ದೇಶಿಯ ರಾಜ ಪ್ರಭುತ್ವವನ್ನು ಕೊನೆಗಾಣಿಸಲು ತೀವ್ರ ಹೋರಾಟ ನಡೆಸಿದರು. ಈ ಹೋರಾಟ ಮೈಸೂರು ಸಂಸ್ಥಾನದ ಹಿನ್ನಲೆಯಲ್ಲಿ ಜನಪದ ಬಿಡಾಗಿರುವ ತುಮಕೂರು ಪ್ರದೇಶದಲ್ಲಿ ಸ್ವಾತಂತ್ರ್ಯ ಚಳುವಳಿಯನ್ನು ಕಾಣಬಹುದು. ಈ ಜಿಲ್ಲೆಯ ಜನತೆ ತಮ್ಮ ತನು ಮನ ಪ್ರಾಣಗಳನ್ನು ತ್ಯಾಗ ಮಾಡಿ ಭಾರತದ ಸ್ವಾತಂತ್ರ್ಯ ಮತ್ತು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ನಡೆದ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು.

ಮೈಸೂರು ಸಂಸ್ಥಾನದಲ್ಲಿ ಅಂದಿನ ಶಿಕ್ಷಣ ಮಟ್ಟ, ವೃತ್ತ ಪತ್ರಿಕೆಗಳು, ಪ್ರಜಾಪ್ರತಿನಿಧಿ ಸಭೆ, ನ್ಯಾಯವಿಧಾಯಕ ಸಭೆಗಳಲ್ಲಿನ ಕಾರ್ಯಕಲಾಪಗಳು, ತಿಲಕ್ ಮತ್ತು ಮಹಾತ್ಮಗಾಂಧೀಜಿ ಅವರ ಸ್ಫೂರ್ತಿದಾಯಕ ಭಾಷಣಗಳು ಜನತೆಯಲ್ಲಿ ರಾಷ್ಟ್ರೀಯ ಮತ್ತು ರಾಜಕೀಯ ಜಾಗೃತಿಯನ್ನು, ಆಡಳಿತದಲ್ಲಿ ಆಸಕ್ತಿಯನ್ನುಂಟು ಮಾಡಿದವು. ೧೯೨೦ ಕ್ಕಿಂತ ಮುಂಚೆ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಕಾರ್ಯಚಟುವಟಿಕೆಗಳು ಬ್ರಿಟಿಷ್ ಇಂಡಿಯಾ ಪ್ರಾಂತ್ಯಗಳಿಗೆ ಹೆಚ್ಚು ಸೀಮಿತವಾಗಿದ್ದವು. ದೇಶಿಯ ಸಂಸ್ಥಾನಗಳಿಗೆ ಚಳುವಳಿಯ ಕಾವು ನಿಧಾನಗತಿಯಲ್ಲಿ ಹರಡಿತು.

೧೯೨೦ರ ನಾಗಪುರ ಕಾಂಗ್ರೆಸ್ ಅಧಿವೇಶನದಿಂದ ಮೈಸೂರು ಜನತೆಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸುವ ಅವಕಾಶ ಲಭಿಸಿತು. ಈ ಅಧಿವೇಶನದಲ್ಲಿ ತೆಗೆದುಕೊಂಡ ನಿರ್ಣಯದ ಪ್ರಕಾರ ಪ್ರತಿಯೊಂದು ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿ ಕಾಂಗ್ರೆಸ್ ಶಾಖೆಗಳು ಪ್ರಾರಂಭವಾದವು ಎಂದು ಕೆ.ಎಸ್.ಮುನೇಗೌಡರವರು ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ.[೩೭] ಈ ಹಿನ್ನಲೆಯಲ್ಲಿ ತುಮಕೂರಿನಲ್ಲಿ ವಕೀಲರು, ಪತ್ರಕರ್ತರು ಆಗಿದ್ದ ಕೆ.ರಂಗೈಯ್ಯಂಗಾರ್ ತುಮಕೂರು ಜಿಲ್ಲಾ ಕಾಂಗ್ರೆಸ್ ಕಮಿಟಿಯನ್ನು ಸ್ಥಾಪಿಸಿದರು.

ಗಾಂಧೀಜಿಯವರ ರಾಜಕೀಯ ಪ್ರವೇಶದ ನಂತರ ಸಂಸ್ಥಾನದಲ್ಲಿ ಜನತೆ ಹೆಚ್ಚು ರಾಜಕೀಯ ಚಟುವಟಿಕೆಗಳಲ್ಲಿ ತೊಡಗಲು ಪ್ರಾರಂಭಿಸಿದರು. ಇವರು ಇಡೀ ರಾಷ್ಟ್ರದ ಜನತೆ ಚಳುವಳಿಯಲ್ಲಿ ಭಾಗವಹಿಸಲು ಕರೆ ಕೊಟ್ಟಾಗ ಸಮಾಜದ ಎಲ್ಲ ವರ್ಗಗಳು ಅದರಲ್ಲಿ ಮುಖ್ಯವಾಗಿ ವಿದ್ಯಾರ್ಥಿಗಳು, ರೈತರು, ಕಾರ್ಮಿಕರು, ವಕೀಲರು, ಮಹಿಳೆಯರು, ವಿದ್ಯಾವಂತ, ಅವಿದ್ಯಾವಂತ ವರ್ಗಗಳು ಭಾಗವಹಿಸಿದವು. ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಿಂದ ಪ್ರಭಾವಿತರಾದ ಜಿಲ್ಲೆಯ ಕಾಂಗ್ರೆಸ್ ನಾಯಕರುಗಳು ಅದರಲ್ಲಿ ಮುಖ್ಯವಾಗಿ ತಾಳಕೆರೆ ಸುಬ್ರಹ್ಮಣ್ಯಂ, ಟಿ.ಸಿ.ನಂಜುಂಡಯ್ಯ, ಕೆ.ರಂಗೈಯ್ಯಾಂಗಾರ್, ಮಾಲಿ ಮರಿಯಪ್ಪ, ಬಿ.ತಾರೇಗೌಡ, ಕೆ.ನಂಜುಂಡರಾವ್, ಕೆ.ವಿ.ಸುಬ್ರಹ್ಮಣ್ಯಸ್ವಾಮಿ ಮುಂತಾದವರು ಜಿಲ್ಲೆಯ ವಿವಿಧ ಭಾಗಗಳಲ್ಲಿ ಕಾಂಗ್ರೆಸ್ ಶಾಖೆಗಳನ್ನು, ಖಾದಿಕೇಂದ್ರಗಳನ್ನು ಸ್ಥಾಪಿಸಿದರು. ಮಹಾತ್ಮಗಾಂಧೀಜಿ ಯವರು ೧೯೩೦ರಲ್ಲಿ ಕರೆ ನೀಡಿದ ನಾಗರಿಕ ಕಾನೂನುಭಂಗ ಚಳುವಳಿಗೆ ಮೈಸೂರು ಸಂಸ್ಥಾನದಲ್ಲಿ ಉತ್ತಮ ಪ್ರತಿಕ್ರಿಯೆ ವ್ಯಕ್ತವಾಗಿರುವುದನ್ನು ಗೆಜೆಟಿಯರ್‌ಗಳು ತಿಳಿಸುತ್ತದೆ. ಸೂರ್ಯನಾಥ ಕಾಮತ್ ಇದೇ ಅಭಿಪ್ರಾಯ ಸೂಚಿಸಿದ್ದಾರೆ. ಗಾಂಧೀಜಿಯವರು ತುಮಕೂರು ಜಿಲ್ಲೆಗೆ ಪ್ರವಾಸ ಕೈಗೊಂಡ ಬಗ್ಗೆ ಸಿದ್ದವ್ವನಹಳ್ಳಿ ಕೃಷ್ಣಶರ್ಮ ಉಲ್ಲೇಖಿಸಿದ್ದಾರೆ.[೩೮] ಒಟ್ಟಾರೆ ಗಾಂಧೀಜಿಯವರ ಕಾನೂನುಭಂಗ ಚಳುವಳಿಯು, ಮೈಸೂರು ಸಂಸ್ಥಾನದ ರಾಜಕೀಯ ಚಳುವಳಿಗೆ ಹೊಸ ತಿರುವು ನೀಡಿತು. ಗಾಂಧೀಜಿ ಉಪ್ಪಿನ ಸತ್ಯಾಗ್ರಹ ಕೈಗೊಂಡಾಗ ಕರ್ನಾಟಕದಲ್ಲೂ ಅದು ಪ್ರತಿಧ್ವನಿಸಿ ಸಿರಸಿ, ಸಿದ್ಧಾಪುರ, ಅಂಕೋಲಗಳಲ್ಲಿ ನಡೆದ ಸತ್ಯಾಗ್ರಹದಲ್ಲಿ ತುಮಕೂರಿನ ಸ್ವಯಂ ಸೇವಕರು ಭಾಗವಹಿಸಿದ್ದರು.

ಗಾಂಧೀಜಿ ಕರೆ ನೀಡಿದ 'ಕ್ವಿಟ್ ಇಂಡಿಯಾ' ಚಳುವಳಿ ಅವರು ಕೈಗೊಂಡ ಅಂತಿಮ ಮತ್ತು ನಿರ್ಣಾಯಕ ಹೋರಾಟವಾಗಿತ್ತು. ಈ ಚಳುವಳಿಗೆ ರಾಷ್ಟ್ರವ್ಯಾಪ್ತಿ ಬೆಂಬಲ ದೊರೆಯಿತು. ಗಾಂಧೀಜಿ ಅವರ 'ಮಾಡು ಇಲ್ಲವೆ ಮಡಿ' ಎಂಬ ಕರೆಗೆ ಮನ್ನಣೆ ನೀಡಿದ ಮೈಸೂರು ಸಂಸ್ಥಾನದ ಜನತೆ ಚಳುವಳಿ ಪ್ರಾರಂಭಿಸಿದರು. ತುಮಕೂರು ಜಿಲ್ಲೆಯಲ್ಲಿಯೂ ಈ ಚಳುವಳಿಗೆ ವ್ಯಾಪಕ ಬೆಂಬಲ ವ್ಯಕ್ತವಾಗಿರುವುದನ್ನು ಹಲವು ಕೃತಿಗಳು ತಿಳಿಸುತ್ತವೆ.

**ಅಡಿಟಿಪ್ಪಣಿ**

೧. ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೩-೫

೨. ರಾಜಾರಾಮ ಹೆಗಡೆ(ಸಂ), ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪, ಪು.xvii

೩. ಮೋಹನ್ ಕೃಷ್ಣ ರೈ ಕೆ., ಪೂರ್ವೋಕ್ತ, ೨೦೦೪, ಪು.೯

೪. ಬಿಪನ್ ಚಂದ್ರ, ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್, ಪೆಂಗ್ವಿನ್ ಬುಕ್ಸ್, ನವದೆಹಲಿ, ೧೯೮೯, ಪು.೧೭

೫. ರಾಜಾರಾಮ ಹೆಗಡೆ(ಸಂ), **ಪೂರ್ವೋಕ್ತ**, ೨೦೦೪, ಪು.xvii

೬. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ. (ಸಂ), **ಕರ್ನಾಟಕ ಇತಿಹಾಸ ದರ್ಶನ**, ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು ೧೯೭೦, ಪು.೫೭೯

೭. ಸಿದ್ಧವ್ವನಹಳ್ಳಿ ಕೃಷ್ಣಶರ್ಮ (ಸಂ), **ಗಾಂಧಿ ಮತ್ತು ಕರ್ನಾಟಕ**, ಶ್ರೀರಾಮಚಂದ್ರವಡವಿ ಪ್ರಕಾಶನ, ಬೆಂಗಳೂರು, ೧೯೭೦, ಪು.೧

೮. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ.(ಸಂ), **ಪೂರ್ವೋಕ್ತ**, ೧೯೭೦, ಪು.೫೯೨

೯. ಚಂದ್ರಶೇಖರ್ ಎಸ್., **ದಕ್ಷಿಣ ಭಾರತ : ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦, ಪು.೨೦, ೨೫

೧೦. ವೀರತಪ್ಪ ಕೆ.(ಸಂ), **ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ**, ವಿಜಯರವಿ ಪ್ರಕಾಶನ, ಬೆಂಗಳೂರು ೧೯೭೭, ಪು.೯

೧೧. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ.(ಸಂ), **ಪೂರ್ವೋಕ್ತ**, ೧೯೭೦, ಪು.೫೮೯

೧೨. ಭಾಸ್ಕರಪ್ಪ ಸಿ.ಎನ್.(ಸಂ), **ತುಮಕೂರು ಜಿಲ್ಲಾ ದರ್ಶನ**, ಟೈಮ್ಸ್ ಪಬ್ಲಿಕೇಷನ್ಸ್ , ತುಮಕೂರು, ೧೯೮೧, ಪು.೬೨

೧೩. ಶಂಕರನಾರಾಯಣರಾವ್ ಎನ್.ಪಿ.(ಸಂ), **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೬, ಪು.೧೬೨

೧೪. ಶ್ರೀನಿವಾಸಯ್ಯ ಎಚ್., ಎನ್.ಎಸ್.ಹರ್ಡೀಕರ್, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೮೨, ಪು.

೧೫. ಸೂರ್ಯನಾಥ ಕಾಮತ್(ಸಂ), **ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು**, ಸಂಪುಟ ೨, ಗೀತಾಬುಕ್ ಹೌಸ್, ಮೈಸೂರು ೧೯೭೭, ಪು.೪೯

೧೬. ಗೋಪಾಲರಾವ್ ಎಚ್.ಎಸ್.(ಸಂ), **ನಮ್ಮ ನಾಡು ಕರ್ನಾಟಕ**, ನವಕರ್ನಾಟಕ ಪ್ರಕಾಶನ, ಬೆಂಗಳೂರು ೧೯೯೩, ಪು.೯೭

೧೭. ಸೂರ್ಯನಾಥ ಕಾಮತ್, **ಪೂರ್ವೋಕ್ತ**, ೧೯೭೭, ಪು.೪೨೭

೧೮. ವೀರತಪ್ಪ ಕೆ.(ಸಂ), **ಪೂರ್ವೋಕ್ತ**, ೧೯೭೭, ಪು.೨೨

೧೯. ಸೂರ್ಯನಾಥ ಕಾಮತ್, **ಪೂರ್ವೋಕ್ತ**, ೧೯೭೭, ಸಂಪುಟ-೨, ಪು.೪೨೩

೨೦. ಸಿದ್ಧವ್ವನಹಳ್ಳಿ ಕೃಷ್ಣಶರ್ಮ(ಸಂ), **ಪೂರ್ವೋಕ್ತ**, ೧೯೭೦, ಪು.೧೯೭

೨೧. ಪೌರವಾಣಿ, ೧೩-೧೦-೧೯೪೭ (ಕ.ಪ.೩)

೨೨. ಕಾನ್ಫಿಡೆನ್ಸಿಯಲ್ ಕಲೆಕ್ಷನ್, ನಂ.೮೬:೮೫, ಇಯರ್ ೧೯೪೫-೪೬, ನೆ.ಬಿ.೧೨-೪೫-೮೨

೨೩. ಗೋಪಾಲರಾವ್ ಎಚ್.ಎಸ್.(ಸಂ), ನಮ್ಮ ನಾಡು **ಕರ್ನಾಟಕ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೩, ಪು.೯೮

೨೪. ಯೋಗೀಶ್ ಡಿ.ಎನ್.(ಸಂ), ಜಯಮಂಗಲಿ ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨, ಪು.೩೨

೨೫. ಮಾಲಿಮುದ್ದಣ್ಣ(ಸಂ), ಮಾಲಿ ಮರಿಯಪ್ಪ, ಸಾಹಿತ್ಯಾಲಯ, ಗಾಂಧಿನಗರ, ತುಮಕೂರು, ೧೯೬೯, ಪು.೮೭

೨೬. ಸೂರ್ಯನಾಥ ಕಾಮತ್, **ಕ್ವಿಟ್ ಇಂಡಿಯ ಮೂವ್‌ಮೆಂಟ್ ಇನ್ ಕರ್ನಾಟಕ,** ಲಿಪಿ ಪ್ರಕಾಶನ, ಬೆಂಗಳೂರು, ೧೯೮೮, ಪು.೨೩

೨೭. ವೀರತಪ್ಪ ಕೆ., **ರೀಡಿಂಗ್ಸ್ ಇನ್ ಮಾರ್ಡನ್ ಹಿಸ್ಟರಿ ಆಫ್ ಮೈಸೂರ್,** ಎಸ್.ಚಂದನ್ ಅಂಡ್ ಕಂಪನಿ ಲಿಮಿಟೆಡ್, ನ್ಯೂಡೆಲ್ಲಿ, ೧೯೮೫, ಪು.೮೩

೨೮. ಶ್ರೀನಿವಾಸಮೂರ್ತಿ ಎಚ್.ವಿ., ಮತ್ತು ರಾಮಕೃಷ್ಣನ್ ಆರ್., **ಸಮಗ್ರ ಕರ್ನಾಟಕ ಚರಿತ್ರೆ,** ಓರಿಯಂಟ್ ಲಾಂಗ್‌ಮನ್ ಲಿಮಿಟೆಡ್, ಬೆಂಗಳೂರು ೧೯೯೫, ಪು.೪೪೧

೨೯. ಗೋಪಾಲ ಆರ್.(ಸಂ), **ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೪, ಪು.೨೭೯

೩೦. ಯೋಗೀಶ್ ಡಿ.ಎನ್.(ಸಂ), **ಪೂರ್ವೋಕ್ತ,** ೨೦೦೨, ಪು.೩೧

೩೧. ಗೋಪಾಲರಾವ್ ಎಚ್.ಎಸ್.(ಸಂ), **ನಮ್ಮ ನಾಡು ಕರ್ನಾಟಕ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೩, ಪು.೯೮

೩೨. ಯೋಗೀಶ್ ಡಿ.ಎನ್.(ಸಂ), **ಪೂರ್ವೋಕ್ತ,** ೨೦೦೨, ಪು.೩೨

೩೩. ಭಾಸ್ಕರಪ್ಪ ಸಿ.ಎನ್.(ಸಂ), **ತುಮಕೂರು ಜಿಲ್ಲಾ ದರ್ಶನ,** ಟೈಮ್ಸ್ ಪಬ್ಲಿಕೇಷನ್ಸ್ , ತುಮಕೂರು, ೧೯೮೧, ಪು.೬೪, ೬೫.

೩೪. ವೀರತಪ್ಪ ಕೆ., **ಪೂರ್ವೋಕ್ತ,** ೧೯೭೭, ಪು.೧೧೮

೩೫. ಹಂಡ ಆರ್.ಎಲ್., ಹಿಸ್ಟರಿ ಆಫ್ ಫ್ರೀಡಂ ಸ್ಟ್ರಗಲ್ ಇನ್ ಪ್ರಿನ್ಸ್‌ಲಿ ಸ್ಟೇಟ್ಸ್, ನವದೆಹಲಿ, ಪು.೧

೩೬. ಚಂದ್ರಶೇಖರ್ ಎಸ್., **ಆಧುನಿಕ ಕರ್ನಾಟಕ ಆಂದೋಲನಗಳು,** ನಮ್ಮ ಪ್ರಕಾಶನ, ಬಿಳಿಗೆರೆ, ತಿಪಟೂರು ತಾಲ್ಲೂಕು, ೨೦೦೨, ಪು.೧೩,೧೪

೩೭. ಮುನೇಗೌಡ ಕೆ.ಎಸ್., **ಡೆವಲಫ್‌ಮೆಂಟ್ ಆಫ್ ಕರ್ನಾಟಕ ಲೆಜಿಸ್ಲೇಚರ್,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೮೮, ಪು.೧೦೦

೩೮. ಸಿದ್ಧವ್ವನಹಳ್ಳಿ ಕೃಷ್ಣಶರ್ಮ(ಸಂ), **ಗಾಂಧಿ ಮತ್ತು ಕರ್ನಾಟಕ,** ಗಾಂಧಿ ಸ್ಮಾರಕ ನಿಧಿ, ಬೆಂಗಳೂರು, ೧೯೭೦ ಪು.೧೯೭

೪

# ವಸಾಹತೋತ್ತರ ಕಾಲದ ಚಾರಿತ್ರಿಕ ಕೃತಿಗಳ ಅವಲೋಕನ

## ಕರ್ನಾಟಕ ಏಕೀಕರಣ ಘಟ್ಟ

ಕನ್ನಡ ಭಾಷೆಯನ್ನಾಡುವ ಜನರಲ್ಲೂ ಕೂಡ ಭಾಷೆಯ ಆಧಾರದ ಮೇಲೆ ಪ್ರಾಂತ್ಯ ರಚನೆಯಾಗಬೇಕೆಂಬ ಕೂಗು ಪ್ರಾರಂಭವಾಯಿತು. ಕನ್ನಡ ಭಾಷಿಕ ಪ್ರಾಂತ್ಯಗಳು ಬೇರೆ ಬೇರೆ ಭಾಷಿಕರ ಆಡಳಿತದ ಅಡಿಯಲ್ಲಿ ಹರಿದು ಹಂಚಿಹೋಗಿದ್ದವು. ಬ್ರಿಟಿಷ್, ಕರ್ನಾಟಕ ಪ್ರದೇಶಗಳು ಬೊಂಬಾಯಿ ಮತ್ತು ಮದ್ರಾಸ್ ಪ್ರೆಸಿಡೆನ್ಸಿಗಳಿಗೆ ಸೇರಿದ್ದವು. ಮೈಸೂರು ಸಂಸ್ಥಾನವು ಹೆಚ್ಚು ಕನ್ನಡ ಭಾಷೆಯ ಪ್ರಾಂತ್ಯಗಳನ್ನು ಒಳಗೊಂಡಿತ್ತು ಎಂಬುದಾಗಿ ಬಿ.ಷೇಕ್ ಅಲಿ ಸಂಪಾದನದ 'ಕರ್ನಾಟಕ ಚರಿತ್ರೆ', ಸಂಪುಟ-೭ರಲ್ಲಿ ಎಂ.ಜಮುನರವರ 'ಕರ್ನಾಟಕ ಏಕೀಕರಣ' ಲೇಖನದಿಂದ ತಿಳಿಯುತ್ತದೆ.[೧] ಕರ್ನಾಟಕ ಏಕೀಕರಣದ ಚರಿತ್ರೆಯನ್ನು ತಿಳಿಸುವಲ್ಲಿ ಎಚ್.ಎಸ್.ಗೋಪಾಲರಾವ್ ಅವರ 'ಕರ್ನಾಟಕ ಏಕೀಕರಣ ಇತಿಹಾಸ', 'ನಮ್ಮ ನಾಡು ಕರ್ನಾಟಕ' ಸಿ.ಆರ್.ಗೋವಿಂದರಾಜುರವರ 'ಕರ್ನಾಟಕ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ', 'ಕರ್ನಾಟಕ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು', ಆರ್.ಆರ್.ದಿವಾಕರ್‌ರವರ 'ಕರ್ನಾಟಕ ಏಕೀಕರಣ ಕಥೆ', ಸೂರ್ಯನಾಥ ಕಾಮತ್‌ರವರ 'ಕರ್ನಾಟಕ ಸಂಕ್ಷಿಪ್ತ ಇತಿಹಾಸ', ಆಲೂರು ವೆಂಕಟರಾಯರ 'ಕರ್ನಾಟಕ ವಿಕಾಸ', 'ಕರ್ನಾಟಕ ಗತ ವೈಭವ', ಮುಂತಾದವು ನೆರವಾಗಿವೆ.

ಸಣ್ಣ ಸಣ್ಣ ಘಟಕಗಳಾಗಿ ಒಡೆದು ಹೋದ ಕಾರಣ ಪ್ರೆಸಿಡೆನ್ಸಿಗಳಲ್ಲಿ ಕನ್ನಡ ಮಾತನಾಡುವ ಜನರ ಪರಿಸ್ಥಿತಿ ಅತ್ಯಂತ ಶೋಚನೀಯವಾಗಿತ್ತು. ಇಲ್ಲಿ ಕನ್ನಡಿಗರು ಮುಂದುವರೆಯುವಂತಹ ವಾತಾವರಣವಿರಲಿಲ್ಲ. ಬಹುಸಂಖ್ಯಾತರ ನಡುವೆ ತಾವು ಪರಿಗಣಿತರಾಗದೆ ಇದ್ದುದು ಹಾಗೂ ಕನ್ನಡ ಬಂಧುಗಳಿಂದ ತಾವು ದೂರವಾಗಿರುವುದು ಈ ಎರಡು ಕಾರಣಗಳಿಂದ ಕನ್ನಡಿಗರು ನಲುಗಿದರು. ಇದು ತಮಗೊಂದು ಪ್ರತ್ಯೇಕ ಪ್ರಾಂತ್ಯಬೇಕೆಂದು ಒಕ್ಕೊರಲಿನಿಂದ ಕೇಳಲು ಅನುವಾಯಿತು ಎಂಬುದಾಗಿ ಜಮುನರವರು ಕರ್ನಾಟಕ ಏಕೀಕರಣ ಲೇಖನದಲ್ಲಿ ತಿಳಿಸಿದ್ದಾರೆ.[೨] ರಾ.ಹ.ದೇಶಪಾಂಡೆಯವರು ೧೮೯೦ರಲ್ಲಿಯೇ "ಕರ್ನಾಟಕ ವಿದ್ಯಾವರ್ಧಕ ಸಂಘ"ವನ್ನು ಸ್ಥಾಪಿಸಿದರು. ಕನ್ನಡಿಗರು ತಮ್ಮ ಸಂಸ್ಕೃತಿಯ ಬಗ್ಗೆ ಅಭಿರುಚಿಯನ್ನುಂಟು ಮಾಡಬೇಕೆನ್ನುವ ಹಿನ್ನೆಲೆಯಲ್ಲಿ ಸಂಘ ಸ್ಥಾಪನೆಯಾಯಿತು ಎಂಬುದಾಗಿ 'ವಾಗ್ಭೂಷಣ' ಪತ್ರಿಕೆಯಲ್ಲಿ ತಿಳಿಸಲಾಗಿದೆ.[೩] ಆಲೂರು ವೆಂಕಟರಾಯರು ಏಕೀಕರಣ ಕೋರಿ

‘ವಾಗ್ಭೂಷಣ’ದಲ್ಲಿ ಲೇಖನವೊಂದನ್ನು ಬರೆದರು ಎಂಬ ಅಂಶ ಸೂರ್ಯನಾಥ ಕಾಮತ್‌ರವರ ಸಂಪಾದಕತ್ವದ ಕರ್ನಾಟಕ ರಾಜ್ಯ ಗೆಜೆಟಿಯರ್ ಭಾಗ ೧ರಿಂದ ತಿಳಿದುಬರುತ್ತದೆ.[೪] ಇದೆ ಅಂಶ ‘ಚರಿತ್ರೆ ವಿಶ್ವಕೋಶ’, ಸಂಪುಟ-೪ರಲ್ಲಿಯೂ ವ್ಯಕ್ತವಾಗಿದೆ.

ಸ್ವಾತಂತ್ರ್ಯ ಮತ್ತು ಏಕೀಕರಣಕ್ಕಾಗಿ ಕರ್ನಾಟಕದಲ್ಲಿ ಆಂದೋಲನಗಳು ಜೊತೆ-ಜೊತೆಯಲ್ಲಿಯೇ ನಡೆದವಾದರೂ ಏಕೀಕರಣ ಆಂದೋಲನಕ್ಕೆ ಬಹುಸಂಖ್ಯಾತರಿಂದ ಬೆಂಬಲ ದೊರೆಯಿತು. ಕನ್ನಡಿಗರಲ್ಲಿ ಇತಿಹಾಸ ಮತ್ತು ಐತಿಹಾಸಿಕ ವ್ಯಕ್ತಿಗಳ ಬಗ್ಗೆ ಕುತೂಹಲವನ್ನುಂಟು ಮಾಡುವುದು ಸಾಧ್ಯವೆಂದು ಮನಗಂಡು ಆಲೂರು ವೆಂಕಟರಾಯರು ೧೯೧೪ರಲ್ಲಿ ‘ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳಿ’ ಸ್ಥಾಪಿಸಿದರು. ಇದರ ನಿಯತಕಾಲಿಕೆಯಾದ “ಪ್ರಾಚೀನ ಇತಿಹಾಸ”ದ ಮೂಲಕ ಚಾರಿತ್ರಿಕ ಮಹತ್ವವುಳ್ಳ ಸ್ಥಳಗಳ ಬಗ್ಗೆ ಲೇಖನ ಪ್ರಕಟಿಸಲಾಯಿತು ಎಂದು ಜಮುನರವರು “ಕರ್ನಾಟಕ ಏಕೀಕರಣ” ಎಂಬ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.[೫] ವಾಗ್ಭೂಷಣ ನಿಯತಕಾಲಿಕೆ ಹಾಗೂ ವಿದ್ಯಾವರ್ಧಕ ಸಂಘ ಏಕೀಕರಣದ ಸಮಸ್ಯೆಯನ್ನು ಚರ್ಚಿಸಲು ಮುಂದೆ ಒಂದು ಉತ್ತಮ ವೇದಿಕೆಯಾಯಿತು. ೧೯೦೭ರಲ್ಲಿ ಸಂಘದ ಅಧ್ಯಕ್ಷತೆ ವಹಿಸಿ ಮಾತನಾಡುತ್ತ ಆಲೂರು ವೆಂಕಟರಾಯರು ಮದ್ರಾಸು ಮತ್ತು ಉತ್ತರ ಕರ್ನಾಟಕದ ಕನ್ನಡಿಗರನ್ನು ಏಕೀಕರಣಗೊಳಿಸುವ ಬಗ್ಗೆ ಪ್ರಸ್ತಾಪ ಮಾಡಿದರು ಎಂಬುದಾಗಿ ಮಂಗಳವೇಡ ಶ್ರೀನಿವಾಸರಾವ್ ಅವರ ಸಂಪಾದಕತ್ವದ ‘ಕರ್ನಾಟಕ ಏಕೀಕರಣ’, ಕೃತಿಯಲ್ಲಿ ತಿಳಿಸಲಾಗಿದೆ.[೬] ೧೯೦೮ರಲ್ಲಿ ಧಾರವಾಡದಲ್ಲಿ ನಡೆಸಿದ ‘ಅಖಿಲ ಕರ್ನಾಟಕ ಲೇಖಕರ ಸಮ್ಮೇಳನ’ದಿಂದಾಗಿ ಏಕೀಕರಣ ಬೇಡಿಕೆಗೆ ಮತ್ತಷ್ಟು ಬಲಬಂದಿತು. ೧೯೧೫ರಲ್ಲಿ ಮೈಸೂರು ಅರಸರ ಕೃಪಾಶ್ರಯದಲ್ಲಿ ಸ್ಥಾಪಿತವಾದ “ಕನ್ನಡ ಸಾಹಿತ್ಯ ಪರಿಷತ್”ನಿಂದಾಗಿ ಇನ್ನೂ ಪ್ರಚೋದನೆ ದೊರೆಯಿತು. ಏಕೀಕರಣವನ್ನು ಗುರಿಯಾಗಿಸಿಕೊಂಡು ಧಾರವಾಡದಲ್ಲಿ ೧೯೧೬ರಲ್ಲಿ “ಏಕೀಕರಣ ಸಭಾ” ಸ್ಥಾಪಿತವಾಯಿತು. ಇದು ಆಲೂರು ವೆಂಕಟರಾಯರ ಪ್ರಯತ್ನದ ಫಲವಾಗಿದೆ ಎಂದು ಸೂರ್ಯನಾಥ ಕಾಮತ್‌ರವರು ‘ಕರ್ನಾಟಕ ರಾಜ್ಯ ಗೆಜೆಟಿಯರ್’, ಭಾಗ ೧ರಲ್ಲಿ ತಿಳಿಸಿದ್ದಾರೆ.[೭] ಅಲೂರು ವೆಂಕಟರಾಯರು ಚಳುವಳಿಗೆ ನೀಡಿದ ಉತ್ತೇಜನಕ್ಕಾಗಿ ಅವರನ್ನು ಕರ್ನಾಟಕದ ಕುಲ ಪುರೋಹಿತ ಎಂದು ಕರೆಯಲಾಯಿತು ಎಂಬುದಾಗಿ ಚರಿತ್ರೆ ವಿಶ್ವಕೋಶ ಸಂಪುಟ-೪ರಲ್ಲಿ ಎಸ್.ಎ.ಜಾವೆದ್‌ರವರ ‘ಏಕೀಕರಣ’ ಎಂಬ ಲೇಖನದಲ್ಲಿ ತಿಳಿಸಲಾಗಿದೆ.[೮] ಕನ್ನಡ ಸಾಹಿತ್ಯ ಪರಿಷತ್ತು, ಬರಹಗಾರರು ಹಾಗೂ ಪತ್ರಕರ್ತರು ಏಕೀಕರಣಕ್ಕಾಗಿ ದುಡಿದರು ಎನ್ನುವ ಹೇಳಿಕೆಯನ್ನು ಮೈಸೂರಿನ ಸಂದರ್ಭದಲ್ಲಿ ಸಮರ್ಥಿಸುವುದು ಕಷ್ಟ. ಆದರೆ ಪರಿಷತ್ತು ತನ್ನ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಪರೋಕ್ಷವಾಗಿ ಏಕೀಕರಣಕ್ಕೆ ಬೆಂಬಲವಾಯಿತು ಎಂಬುದರಲ್ಲಿ ಎರಡು ಮಾತಿಲ್ಲ ಎಂಬುದಾಗಿ ಸಿ.ಆರ್. ಗೋವಿಂದರಾಜುರವರ ‘ಕರ್ನಾಟಕ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು’, ಕೃತಿಯಿಂದ ತಿಳಿಯುತ್ತದೆ.[೯]

ಕರ್ನಾಟಕದ ಏಕೀಕರಣಕ್ಕಾಗಿ ಕನ್ನಡ ಅಥವಾ ಕರ್ನಾಟಕ ಹೆಸರಿನಲ್ಲಿ ಸ್ಥಾಪನೆಗೊಂಡ ಅನೇಕ ಸಾಂಸ್ಕೃತಿಕ ಸಂಸ್ಥೆಗಳು ಏಕೀಕರಣದ ಕನಸು ಕಂಡು ಹೋರಾಡಿದವು. ಆದರೆ ಮೈಸೂರು ಸಂಸ್ಥಾನ ಹೋರಾಟದಿಂದ ಹೊರಗಿತ್ತು ಎಂಬುದಾಗಿ ಎಚ್.ಎಸ್.ಗೋಪಾಲರಾವ್‌ರವರು 'ನಮ್ಮ ನಾಡು ಕರ್ನಾಟಕ', ಕೃತಿಯಲ್ಲಿ ತಿಳಿಸಿದ್ದಾರೆ.[೧೦] ಇದರಿಂದ ಮೈಸೂರು ಸಂಸ್ಥಾನಕ್ಕೆ ಒಳಪಟ್ಟಿದ್ದ ತುಮಕೂರು ಪ್ರದೇಶವು ಇದೇ ರೀತಿಯ ನಿಲುವು ತಾಳಿತ್ತು ಎಂಬುದು ಸ್ಪಷ್ಟಪಡುತ್ತದೆ. ಈ ಪ್ರದೇಶದ ಏಕೀಕರಣ ಹೋರಾಟವನ್ನು ಮೈಸೂರು ಸಂಸ್ಥಾನದ ಚಳುವಳಿಯ ಹಿನ್ನೆಲೆಯಲ್ಲಿಯೇ ಚರ್ಚಿಸುವುದಾಗಿದೆ. ಈ ನಿಟ್ಟಿನಲ್ಲಿ ಚಾರಿತ್ರಿಕ ಕೃತಿಗಳನ್ನು ಅವಲೋಕಿಸಲಾಗಿದೆ.

ಮೈಸೂರು ಸಂಸ್ಥಾನದ ಕನ್ನಡಿಗರಿಗೆ ಕರ್ನಾಟಕದ ಏಕೀಕರಣದ ಬಗೆಗೆ ಪ್ರಬಲವಾದ ಹೋರಾಟ ನಡೆಸುವ ಮನೋಭಾವ ಇನ್ನೂ ಮೂಡಿರಲಿಲ್ಲ. ತಮ್ಮನ್ನು ಆಳುತ್ತಿರುವ ರಾಜರು ಕನ್ನಡದವರು; ತಾವಿರುವುದು ಕನ್ನಡ ನೆಲದಲ್ಲಿ ಎಂಬ ಸಮಾಧಾನ ಅವರಿಗಿತ್ತು. ತಾವು ಮಿಕ್ಕ ಭಾಗದವರಿಗಿಂತ ಶ್ರೇಷ್ಠರೆಂಬ ಭಾವನೆ ಹಳೆಯ ಮೈಸೂರಿನವರಿಗಿತ್ತು ಎಂಬುದಾಗಿ ಎಚ್.ಎಸ್.ಗೋಪಾಲರಾವ್ ರವರು 'ಕರ್ನಾಟಕ ಏಕೀಕರಣ ಇತಿಹಾಸ', ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.[೧೧] ಏಕೀಕರಣ ಚರಿತ್ರೆಯನ್ನು ತಿಳಿಸುವಲ್ಲಿ ಈ ಕೃತಿ ಮಹತ್ವದ ಮಾಹಿತಿ ನೀಡುತ್ತದೆ. ಏಕೀಕರಣಕ್ಕಾಗಿ ಉದಯಿಸಿದ ಸಂಘ-ಸಂಸ್ಥೆಗಳು, ಅದರ ನಾಯಕರು, ಕವಿಗಳು, ವಿದ್ವಾಂಸರು, ಪರ್ತಕರ್ತರು ನಿರ್ವಹಿಸಿದ ಪಾತ್ರದ ಬಗ್ಗೆ ವಿವರಣೆ ಒದಗಿಸುತ್ತದೆ. ಇದರಲ್ಲಿ ಮೈಸೂರು ಸಂಸ್ಥಾನ ಮತ್ತು ಏಕೀಕರಣ ಸಂಬಂಧ ಕುರಿತು ವಿಶ್ಲೇಷಿಸಲಾಗಿದೆ. ಮೇಲುನೋಟಕ್ಕೆ ಮೈಸೂರಿನವರು ಬ್ರಿಟಿಷ್ ಕರ್ನಾಟಕದ ಜನರಿಗಿಂತ ಹೆಚ್ಚು ತೃಪ್ತರಾದಂತೆ ತೋರಿದರು. ಸಾಂಸ್ಕೃತಿಕವಾಗಿ ಮೈಸೂರು ಹೆಚ್ಚು ಪ್ರಗತಿ ಸಾಧಿಸಿದೆಯೆಂಬ ಕಲ್ಪನೆ ವ್ಯಾಪಕವಾಗಿತ್ತು ಎಂಬುದಾಗಿ ಜಮುನರವರ 'ಕರ್ನಾಟಕದ ಏಕೀಕರಣ', ಎಂಬ ಲೇಖನದಿಂದ ತಿಳಿಯುತ್ತದೆ.[೧೨] ಸೂರ್ಯನಾಥ ಕಾಮತ್ ರವರ 'ಕರ್ನಾಟಕ ರಾಜ್ಯ ಗೆಜೆಟಿಯರ್'ಭಾಗ ೧ರಲ್ಲಿ ಇದೇ ಅಂಶ ವ್ಯಕ್ತವಾಗಿದೆ. ಆದರೂ ಮೈಸೂರು ಭಾಗದ ಸಾಹಿತಿಗಳು ಮತ್ತು ಪತ್ರಿಕಾರಂಗ ಏಕೀಕರಣ ಪರವಾಗಿದ್ದುದು ಈ ಕೃತಿಗಳಲ್ಲಿ ಉಲ್ಲೇಖಿತಗೊಂಡಿದೆ.

ಧಾರವಾಡದಲ್ಲಿ ವಿ.ಪಿ.ಮಾಧವರಾಯರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ಪ್ರಾಂತ್ಯ ರಾಜಕೀಯ ಸಮ್ಮೇಳನ, ಅದೇ ೧೯೨೦ರಲ್ಲಿ ನಡೆದ ನಾಗಪುರ ಕಾಂಗ್ರೆಸ್ ಅಧಿವೇಶನ ಹಾಗೂ ೧೯೨೪ರಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯನ್ನು ನಡೆದ ಬೆಳಗಾವಿ ಕಾಂಗ್ರೆಸ್ ಅಧಿವೇಶನ ಏಕೀಕರಣ ದಿಸೆಯಲ್ಲಿ ಮಹತ್ತರ ಹೆಜ್ಜೆಯಾಗಿ ಪರಿಣಮಿಸಿತು ಎಂಬುದಾಗಿ 'ಕರ್ನಾಟಕ ರಾಜ್ಯ ಗೆಜೆಸೆಟಿಯರ್', ಭಾಗ ೧ರಲ್ಲಿ ತಿಳಿಸಲಾಗಿದೆ.[೧೩] ಚರಿತ್ರೆ ವಿಶ್ವಕೋಶ ಸಂಪುಟ ೪ರಲ್ಲಿಯೂ ಇದೇ ಅಂಶ ವ್ಯಕ್ತವಾಗಿದೆ. ಈ ಅಧಿವೇಶನದಲ್ಲಿ ಹುಯಿಲಗೋಳ ನಾರಾಯಣ ರಾಯರು ಹಾಡಿದ "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಎಂಬ ಹಾಡು ಅತ್ಯಂತ ಭಾವನಾತ್ಮಕವಾಗಿದ್ದು, ಕನ್ನಡಿಗರಲ್ಲಿ ಹೆಮ್ಮೆ ತರುವಂತಿತ್ತು,

'ಏಕೀಕರಣವು ಕರ್ನಾಟಕ ಜನತೆಯ ಅಜನ್ಮ ಸಿದ್ಧ ಹಕ್ಕು' ಎಂಬ ಘೋಷಣೆ ಮಾಡಿ ಕೆ.ಪಿ.ಸಿ.ಸಿ ಉಪಸಮಿತಿ ಮತ್ತು ಏಕೀಕರಣ ಸಭಾ ಸಹಿಸಂಗ್ರಹಣಾ ಚಳುವಳಿ ಆರಂಭಿಸಿದವು ಎಂಬುದಾಗಿ 'ಕರ್ನಾಟಕ ಚರಿತ್ರೆ' ಸಂಪುಟ ೭ರಲ್ಲಿ ಉಲ್ಲೇಖಿಸಲಾಗಿದೆ.[೧೪]

ದಾವಣಗೆರೆಯಲ್ಲಿ ನಡೆದ ಕರ್ನಾಟಕಸ್ಥರ ಮಹಾಸಭೆಯು ಹಲವು ಕಾರಣಗಳಿಂದ ವಿಶಿಷ್ಟವಾಗಿತ್ತು. ಏಕೀಕರಣಕ್ಕಾಗಿ ಬ್ರಿಟಿಷ್ ಕರ್ನಾಟಕದಾಚೆ, ಮೈಸೂರು ಸಂಸ್ಥಾನದ ಪಟ್ಟಣವೊಂದರಲ್ಲಿ ನಡೆದ ಮೊದಲ ಏಕೀಕರಣ ಸಮಾವೇಶ ಇದಾಗಿತ್ತು ಎಂಬುದಾಗಿ ಎಚ್.ಎಸ್.ಗೋಪಾಲ್‌ರಾವ್‌ರವರು 'ಕರ್ನಾಟಕ ಸಂಗಾತಿ', ಕೃತಿಯ 'ಕರ್ನಾಟಕ ಏಕೀಕರಣ' ಎಂಬ ಲೇಖನದಲ್ಲಿ ಉಲ್ಲೇಖಿಸಿದ್ದಾರೆ.[೧೫] ಎಸ್.ಚಂದ್ರಶೇಖರ್ ರವರು 'ಆಧುನಿಕ ಕರ್ನಾಟಕದ ಆಂದೋಲನಗಳು' ಎಂಬ ಕೃತಿಯಲ್ಲಿ ಮೈಸೂರು ಸಂಸ್ಥಾನ ಮತ್ತು ಏಕೀಕರಣ ಚಳುವಳಿ ಸಂಬಂಧ ಕುರಿತು ಸೈದ್ಧಾಂತಿಕವಾಗಿ ವಿಶ್ಲೇಷಿಸಿದ್ದಾರೆ. ೧೯೩೭ರವರೆಗೂ ಹೆಸರಿಸ ಬಹುದಾದ ಮೈಸೂರಿಗರಾರೂ ಏಕೀಕರಣದ ಬಗ್ಗೆ ಪ್ರತಿಕ್ರಿಯಿಸಲಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಏಕೀಕರಣ ಒಂದು ರಾಜಕೀಯ ವಿಷಯ ಎನ್ನುವ ನೆಪವೊಡ್ಡಿ ಚರ್ಚೆಗೆ ಅವಕಾಶವನ್ನೇ ನಿರಾಕರಿಸಿದ್ದುಂಟು ಎಂಬುದಾಗಿ ಎಸ್ .ಚಂದ್ರಶೇಖರ್ 'ಮೈಸೂರು ಮತ್ತು ಏಕೀಕೃತ ಕರ್ನಾಟಕದ ರಚನೆ' ಎಂಬ ಲೇಖನದಲ್ಲಿ ತಿಳಿಸಿದ್ದಾರೆ.[೧೬]

ಮೈಸೂರು ಪ್ರಜಾ ಸಂಯುಕ್ತ ಪಕ್ಷವು ಕಾಂಗ್ರೆಸ್‌ನೊಡನೆ ವಿಲೀನಗೊಂಡು ಕೆ.ಪಿ.ಸಿ.ಸಿ ಯಿಂದ ಪ್ರತ್ಯೇಕ ಕಾಂಗ್ರೆಸ್ ರಚಿಸಿಕೊಂಡ ಬಳಿಕ ಮೈಸೂರು ರಾಜಕಾರಣಿಗಳ ಬಗ್ಗೆ ಗುಮಾನಿ ಉಂಟಾಯಿತು. ಬಹು ಸಂಖ್ಯೆಯಲ್ಲಿ ಏಕೀಕರಣ ಸಮ್ಮೇಳನಗಳು ನಡೆದಾಗ್ಯೂ ಮೈಸೂರಿನಲ್ಲಿ ಹೆಚ್ಚಿನ ಉತ್ಸಾಹ ಮೂಡಲಿಲ್ಲ. ಆದರೆ ಚಳುವಳಿಗೆ ಪ್ರತಿಸ್ಪಂದಿಸದೆ ದೀರ್ಘಕಾಲದವರೆಗೆ ವಿಮುಖವಾಗಿರುವುದು ಕೂಡ ಸಾಧ್ಯವಾಗಲಿಲ್ಲ.[೧೭] ಮೈಸೂರು ಸಂಸ್ಥಾನದಲ್ಲೂ ಕರ್ನಾಟಕದ ಏಕೀಕರಣ ಪರವಾಗಿ ಹಲವು ಸಭೆ-ಸಮ್ಮೇಳನಗಳು ನಡೆದು ಅಲ್ಲಿ ನಿರ್ಣಯಗಳು ಮಂಡಿತವಾದವು. ೧೯೪೬ ನವೆಂಬರ್ ನಲ್ಲಿ ಬೆಂಗಳೂರಿನ ಸುಭಾಷ್ ನಗರದಲ್ಲಿ ನಡೆದ ಮೈಸೂರು ವಾರ್ಷಿಕ ಸಭೆಯು ಬೇರೆ ಬೇರೆ ಆಡಳಿತದಲ್ಲಿ ಹರಿದು-ಹಂಚಿ ಹೋಗಿರುವ ಭಾಗಗಳನ್ನೆಲ್ಲಾ ಒಗ್ಗೂಡಿಸಿ ಶೀಘ್ರವೇ ಕರ್ನಾಟಕದ ರಚನೆ ಆಗಬೇಕು ಎಂದು ಒತ್ತಾಯಿಸುವ ಗೊತ್ತುವಳಿ ಸ್ವೀಕರಿಸಿತು ಎಂಬುದಾಗಿ ಎಚ್.ಎಸ್.ಗೋಪಾಲರಾವ್‌ರವರು 'ಕರ್ನಾಟಕ ಸಂಗಾತಿ' ಎಂಬುದರಲ್ಲಿ ಉಲ್ಲೇಖಿಸಿದ್ದಾರೆ.[೧೮] ನಿಧಾನವಾಗಿಯಾದರೂ ಮೈಸೂರು ಸಂಸ್ಥಾನವು ಏಕೀಕರಣದ ಕಡೆ ಗಮನಹರಿಸಿರುವುದು ಈ ಲೇಖನದಿಂದ ಸ್ಪಷ್ಟಪಡುತ್ತದೆ.

ಭಾರತದ ಸ್ವಾತಂತ್ರ್ಯಾ ನಂತರ ಏಕೀಕರಣದ ಬೇಡಿಕೆ ಇಮ್ಮಡಿಯಾಯಿತು. ಕೇಂದ್ರ ಸರ್ಕಾರ ೧೯೪೮ರಲ್ಲಿ 'ಧಾರ್ ಸಮಿತಿ'ಯನ್ನು ನೇಮಕ ಮಾಡಿತು. ಪ್ರಸ್ತಾಪಿತ ಅಖಂಡ ಕರ್ನಾಟಕ ಒಂದು ಭಾಗವಾಗಿರಲು ಮೈಸೂರು ಸಿದ್ಧವಿಲ್ಲವೆಂದು ಹಾಗೂ ಭಾಷೆಯ ಆಧಾರದ ಮೇಲೆ ಪ್ರಾಂತ್ಯ ರಚಿಸುವುದು

ಸೂಕ್ತವಲ್ಲವೆಂದು ಸಮಿತಿ ವರದಿ ನೀಡಿತು ಎಂಬುದಾಗಿ ಎಂ.ಜಮುನರವರ ಲೇಖನ 'ಕರ್ನಾಟಕ ಏಕೀಕರಣ' ಎಂಬುದರಿಂದ ತಿಳಿಯುತ್ತದೆ.[೧೯] ೧೯೪೮ರಲ್ಲಿ ಏಕೀಕರಣ ಸಮಸ್ಯೆಯನ್ನು ಕುರಿತು ಅಧ್ಯಯನ ಮಾಡಲು ಒಂದು ಸಮಿತಿಯನ್ನು ನೇಮಕ ಮಾಡಿತು. ಇದನ್ನು ಜೆ.ವಿ.ಪಿ.ಕಮಿಟಿ ಎಂದು ಕರೆಯಲಾಯಿತು. ಈ ಸಮಿತಿಯ ವರದಿಯು ಭಾಷಿಕ ಆಧಾರದ ಮೇಲೆ ಪ್ರಾಂತ್ಯ ವಿಂಗಡಿಸುವುದರ ವಿರುದ್ಧ ಎಚ್ಚರಿಸಿತು. ಧಾರ್ ಸಮಿತಿಯ ಅಭಿಪ್ರಾಯವನ್ನು ಜೆ.ವಿ.ಪಿ ಸಮಿತಿ ಒಪ್ಪಿತು. ದೇಶಿಯ ಸಂಸ್ಥಾನಗಳನ್ನು ಇತರ ಪ್ರಾಂತ್ಯಗಳೊಡನೆ ವಿಲೀನಗೊಳಿಸಬೇಕೆಂದು ವರದಿಯಲ್ಲಿ ಶಿಫಾರಸ್ಸಾಗಿದ್ದ ಕಾರಣ ಮೈಸೂರಿನವರೂ ಈ ವರದಿಯಿಂದ ಸಂತೃಪ್ತರಾಗಲಿಲ್ಲ.[೨೦] ಜೆ.ವಿ.ಪಿ.ವರದಿ ಮೈಸೂರಿನ ಹೊರಗಿನ ಏಕೀಕರಣ ವಾದಿಗಳನ್ನು ನಿರಾಶೆಗೊಳಿಸಿತು. ವರದಿಯನ್ನು ಖಂಡಿಸಿ ಚಳುವಳಿ ನಡೆಸಲು ಪ್ರೇರೆಪಿಸಿತು. ಆದರೆ ಮೈಸೂರಿಗರು ಸಾಮಾನ್ಯವಾಗಿ ತಮ್ಮ ಗಂಭೀರ ಮೌನ ಮುಂದುವರೆಸಿದರು. ಇದರಿಂದ ಮೈಸೂರಿಗರ ಒಳಗೊಳಗೆ ಇದ್ದ ಏಕೀಕರಣದ ವಿರೋಧ ಕ್ರಮೇಣ ಬಹಿರಂಗವಾಯಿತು ಎಂಬುದಾಗಿ ಎಸ್.ಚಂದ್ರಶೇಖರ್ ರವರು ತಮ್ಮ 'ಆಧುನಿಕ ಕರ್ನಾಟಕದ ಆಂದೋಲನಗಳು', ಎಂಬ ಕೃತಿಯಲ್ಲಿ ತಿಳಿಸಿದ್ದಾರೆ.[೨೧]

ಕರ್ನಾಟಕ ಏಕೀಕರಣ ಮೊದಲ ಹಂತವಾಗಿ ೧-೧೦-೧೯೫೩ರಂದು ಬಳ್ಳಾರಿ ಜಿಲ್ಲೆಯ ಏಳು ತಾಲ್ಲೂಕುಗಳು ಮೈಸೂರು ರಾಜ್ಯದೊಂದಿಗೆ ವಿಲೀನಗೊಂಡು ಏಕೀಕರಣದ ಪ್ರಕ್ರಿಯೆ ಆರಂಭವಾಯಿತು. ಮೈಸೂರು ರಾಜ್ಯದ ಅಂದಿನ ಮುಖ್ಯಮಂತ್ರಿ ಕೆ.ಹನುಮಂತಯ್ಯನವರು ತಮ್ಮ ವಿಶೇಷ ಸಂದೇಶದಲ್ಲಿ ಬಳ್ಳಾರಿ ಜಿಲ್ಲೆಯ ಕನ್ನಡಿಗರನ್ನು ತುಂಬು ಪ್ರೀತಿಯಿಂದ ಸ್ವಾಗತಿಸಿದರು. ಒಂದೇ ಭಾಷೆಯ ಮತ್ತು ಸಂಸ್ಕೃತಿಯ ಜನ ಬಹುವರ್ಷಗಳ ನಂತರ ಒಂದಾದ ಸಂದರ್ಭದಲ್ಲಿ ಕೊ.ಚೆನ್ನಬಸಪ್ಪ, ಅ.ನ.ಕೃ, ತಿ.ತಾ.ಶರ್ಮ, ತೊಗರಿ ಸರ್ವಮಂಗಳಮ್ಮ ಮುಂತಾದ ಗಣ್ಯರು ವಿಶೇಷ ಲೇಖನಗಳ ಮೂಲಕ ಬಳ್ಳಾರಿ ಜಿಲ್ಲೆಯ ಐತಿಹಾಸಿಕ ಮತ್ತು ಸಾಂಸ್ಕೃತಿಕ ಹಿರಿಮೆ-ಗರಿಮೆಗಳನ್ನು ಕನ್ನಡಿಗರಿಗೆ ಪರಿಚಯಿಸಿದರು ಎಂಬುದಾಗಿ ಎಚ್. ಎಸ್.ಗೋಪಾಲರಾವ್‌ರವರು 'ಕರ್ನಾಟಕ ಏಕೀಕರಣ ಇತಿಹಾಸ' ಕೃತಿಯಲ್ಲಿ ತಿಳಿಸಿದ್ದಾರೆ.[೨೨] ಒಂದೇ ಕರ್ನಾಟಕವಾದರೆ 'ಮಾದರಿ ಮೈಸೂರಿನ ಸಂಯುಕ್ತ ಲಕ್ಷಣಕ್ಕೆ ತೊಂದರೆ ಉಂಟಾಗುತ್ತದೆ. ಈ ಕಾರಣವಾಗಿ 'ಜಾತಿಯ ಅಸಮಾನತೆ ಉಂಟಾಗಿ' ಒಂದು ಕೋಮು (ಲಿಂಗಾಯಿತ) ಪ್ರಬಲವಾಗುತ್ತದೆ ಎನ್ನುವ ಸಂಶಯ, ಭಯಗಳನ್ನು ಮುಂದು ಮಾಡಿದರು. ಮೈಸೂರಿನವರ ವಿರೋಧ ಎಷ್ಟು ಪ್ರಬಲವಾಗಿತ್ತೆಂದರೆ ಇದು ದಿವಾಕರ್‌ರಂಥವರು ಏಕೀಕರಣದ ಕನಸ್ಸು ನನಸಾಗುತ್ತದೆಯೇ ಎಂದು ಅನುಮಾನಿಸುವಂತೆ ಮಾಡಿದರೆ, ಕುವೆಂಪು ಅವರಂಥ ಕವಿಗಳು 'ನೀ ಮೆಟ್ಟುವ ನೆಲ ಅದೇ ಕರ್ನಾಟಕ', ಎಂಬಂಥ ಸಾಲುಗಳನ್ನು ರಚಿಸುವಂತೆ ಮಾಡಿತು. ಆದರೆ ಕೇಂದ್ರ ಸರ್ಕಾರ ಪರಿಸ್ಥಿತಿಯನ್ನು ಕಟ್ಟುನಿಟ್ಟಾಗಿ ನಿಭಾಯಿಸುವ ಮೂಲಕ ವಿರೋಧವನ್ನು ಹತ್ತಿಕ್ಕಿದ ಪರಿಣಾಮ ಮೈಸೂರಿಗರು ಅನಿವಾರ್ಯವಾಗಿ ತಲೆಬಾಗಬೇಕಾಯಿತು ಎಂದು ಎಸ್.ಚಂದ್ರಶೇಖರ್‌ರವರು 'ಆಧುನಿಕ ಕರ್ನಾಟಕದ ಆಂದೋಲನಗಳು' ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.[೨೩]

೧೯೫೩ರಲ್ಲಿ ಫಸಲ್ ಅಲಿರವರ ನೇತೃತ್ವದಲ್ಲಿ ಕೇಂದ್ರ ಸರ್ಕಾರ 'ರಾಜ್ಯಪುನರ್ ವಿಂಗಡಣಾ ಆಯೋಗ', ರಚಿಸಿತು. ಈ ಆಯೋಗ ಸಾಕ್ಷ್ಯ ಸಂಗ್ರಹ ನಡೆಸುತ್ತಿದ್ದಾಗ ಮೈಸೂರು ರಾಜ್ಯದಲ್ಲಿ ಏಕೀಕರಣಕ್ಕೆ ಬಲವಾದ ವಿರೋಧ ವ್ಯಕ್ತಪಟ್ಟಿತು. ಎಂ.ಶೇಷಾದ್ರಿರವರ ನೇತೃತ್ವದಲ್ಲಿ ನೇಮಿಸಿದ್ದ 'ಸತ್ಯಶೋಧನಾ ಸಮಿತಿ' ಇತರ ಹಿಂದುಳಿದ ಭಾಗಗಳೊಂದಿಗೆ ಸೇರ್ಪಡೆಯಾದಲ್ಲಿ ಮೈಸೂರು ಹಾನಿಗೀಡಾಗಬೇಕಾಗುತ್ತದೆ ಎಂದು ಅಭಿಪ್ರಾಯಪಟ್ಟಿತು ಎಂಬುದಾಗಿ ಸೂರ್ಯನಾಥ ಕಾಮತ್‌ರವರು 'ಕರ್ನಾಟಕ ರಾಜ್ಯ ಗೆಜೆಟಿಯರ್' ಭಾಗ ೧ರಲ್ಲಿ ತಿಳಿಸಿದ್ದಾರೆ.[೨೪] ಅಂತಿಮವಾಗಿ ಫಸಲ್ ಅಲಿರವರ ಆಯೋಗದ ಶಿಫಾರಸ್ಸಿನಂತೆ ೧ ನವೆಂಬರ್ ೧೯೫೬ರಂದು ಕರ್ನಾಟಕ ಏಕೀಕರಣಗೊಂಡಿತು.

ತುಮಕೂರು ಪ್ರದೇಶವು ಮೈಸೂರು ಸಂಸ್ಥಾನದ ಒಂದು ಭಾಗವಾಗಿದ್ದು, ಏಕೀಕರಣದ ವಿಷಯದಲ್ಲಿ ಸಂಸ್ಥಾನದ ನಿಲುವುಗಳೇ ಅಧ್ಯಯನ ವಿಷಯದ ಪ್ರದೇಶಕ್ಕೂ ಅನ್ವಯವಾಗಿರುವುದನ್ನು ಹಲವು ಕೃತಿಗಳ ಮೂಲಕ ಅವಲೋಕಿಸುವುದಾಗಿದೆ. ಮೈಸೂರು ಸಂಸ್ಥಾನ ಮತ್ತು ಏಕೀಕರಣ ಚಳುವಳಿಯ ಸಂಬಂಧ ಕುರಿತು ಹಲವು ಕೃತಿಗಳಲ್ಲಿ ವಿಶ್ಲೇಷಿಸಲಾಗಿದೆ.

ಕನ್ನಡ ಕುಲಪುರೋಹಿತರೆಂದು ಖ್ಯಾತರಾದ ಆಲೂರು ವೆಂಕಟರಾಯರು ರಚಿಸಿದ 'ಕರ್ನಾಟಕ ಗತ ವೈಭವ' ಮತ್ತು 'ಕರ್ನಾಟಕತ್ವದ ವಿಕಾಸ' ಕೃತಿಗಳು ಕನ್ನಡಿಗರನ್ನು ಏಕಿಕರಣಕ್ಕಾಗಿ ಎಚ್ಚರಿಸುವಲ್ಲಿ ಮಹತ್ವದ ಪಾತ್ರವಹಿಸಿವೆ. ತಮ್ಮ ಹಿಂದಿನ ಸಾಂಸ್ಕೃತಿಕ ಗತ ಚರಿತ್ರೆಯನ್ನು ನೆನಪಿಗೆ ತಂದು ಕೊಡುವುದರ ಮೂಲಕ ಏಕೀಕರಣ ಚಳುವಳಿಗೆ ಜನರನ್ನು ಸಜ್ಜುಗೊಳಿಸುವ ರೀತಿಯಲ್ಲಿ ಈ ಕೃತಿಗಳು ರಚನೆಗೊಂಡಿವೆ.

ಎಸ್.ಚಂದ್ರಶೇಖರ್‌ರವರು 'ಆಧುನಿಕ ಕರ್ನಾಟಕದ ಆಂದೋಲನಗಳು' ಕೃತಿಯಲ್ಲಿ ಮೈಸೂರು ಸಂಸ್ಥಾನ ಮತ್ತು ಏಕೀಕರಣ ಚಳುವಳಿಯ ನಡುವಣ ಸಂಬಂಧ, ಅದರ ವಿರೋಧಾಬಾಸಗಳು ಕುರಿತು ಸೈದ್ಧಾಂತಿಕವಾಗಿ ವಿಶ್ಲೇಷಿಸಿದ್ದಾರೆ. ಸೂರ್ಯನಾಥ ಕಾಮತ್‌ರವರ ಕರ್ನಾಟಕ ರಾಜ್ಯ ಗೆಜೆಟಿಯರ್ ಭಾಗ-೧ರಲ್ಲಿಯೂ ಇದೇ ಅಂಶ ವ್ಯಕ್ತವಾಗಿದೆ. ಎಚ್.ಎಸ್.ಗೋಪಾಲರಾವ್‌ರವರ ಸಂಪಾದಕತ್ವದ 'ಕರ್ನಾಟಕ ಏಕೀಕರಣ ಇತಿಹಾಸ', ಕೃತಿ ಸಮಗ್ರ ಮಾಹಿತಿಯನ್ನು ನೀಡುತ್ತದೆ. ಕನ್ನಡ ಸಾಹಿತ್ಯ ಪರಿಷತ್, ಕರ್ನಾಟಕ ಸಭೆ, ಕರ್ನಾಟಕ ಏಕೀಕರಣ ಮಹಾಸಭೆ ಮುಂತಾದ ಸಂಘಟನೆಗಳು ನಿರ್ವಹಿಸಿದ ಪಾತ್ರ, ವಿದ್ವಾಂಸರು, ಸಾಹಿತಿಗಳು, ರಾಜಕಾರಣಿಗಳು ಹಾಗೂ ಜನತೆ ಸ್ಪಂದಿಸಿದ ರೀತಿ ನಿಯೋಜಿತವಾದ ಆಯೋಗಗಳು ತೆಗೆದುಕೊಂಡ ನಿಲುವುಗಳನ್ನು ಬಹಳ ಸೂಕ್ಷ್ಮವಾಗಿ ಅಧ್ಯಯನ ನಡೆಸಿರುವುದು ತಿಳಿಯುತ್ತದೆ. ಷೇಕ್ ಅಲಿರವರ ಸಂಪಾದನದ ಕೃತಿ 'ಕರ್ನಾಟಕ ಚರಿತ್ರೆ' ಸಂಪುಟ ೭ರಲ್ಲಿ ಎಂ.ಜಮುನರವರ ಲೇಖಕ 'ಕರ್ನಾಟಕ ಏಕೀಕರಣ' ಎಂಬುದರಲ್ಲಿ ಮೈಸೂರು ಸಂಸ್ಥಾನ ಏಕೀಕರಣ ಸಮಯದಲ್ಲಿ ಎಂಥ ನಿರ್ಧಾರ ತೆಗೆದುಕೊಂಡಿತ್ತು ಚಳುವಳಿಯನ್ನು ಸಂಸ್ಥಾನ ವಿರೋಧಿಸಲು ಒಡ್ಡಿದ ಕಾರಣಗಳನ್ನು ಕುರಿತು ಅವಲೋಕಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಚಂದ್ರಶೇಖರ್ ಎಸ್.(ಸಂ), **ಕರ್ನಾಟಕ ಚರಿತ್ರೆ,** ಸಂಪುಟ-೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೨೧೬

೨. ಅದೇ, ಪು.೨೧೬.

೩. ವಾಗ್ಭೂಷಣ (ಕನ್ನಡ ಸಾಪ್ತಾಹಿಕ) ಧಾರವಾಡ, ೧೯೭೩, ಪು.೧೮೭, ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಇದರ ಹಳೆಯ ಸಂಚಿಕೆಯನ್ನು ರಕ್ಷಿಸಲಾಗಿದೆ.

೪. ಸೂರ್ಯನಾಥ ಕಾಮತ್, **ಕರ್ನಾಟಕ ರಾಜ್ಯ ಗೆಜೆಟಿಯರ್,** ಭಾಗ ೧, ಪರಿಶ್ರೀ ಪ್ರಿಂಟರ್ಸ್ ಬೆಂಗಳೂರು, ೧೯೮೪, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ, ಪು.೨೯೫

೫. ಚಂದ್ರಶೇಖರ್ ಎಸ್.(ಸಂ), **ಪೂರ್ವೋಕ್ತ,** ೧೯೯೭, ಪು.೨೧೯

೬. ಮಂಗಳವೇಡ ಶ್ರೀನಿವಾಸರಾವ್ ಮತ್ತು ಸಂಗಮ ನಾರಾಯಣ, **ಕರ್ನಾಟಕ ಏಕೀಕರಣ,** ರಾಷ್ಟ್ರೀಯ ವಾಗ್ಮಯ ಪ್ರಕಾಶನ ಟ್ರಸ್ಟ್, ಹುಬ್ಬಳ್ಳಿ, ೧೯೪೬, ಪು.೩೮, ೩೯

೭. ಸೂರ್ಯನಾಥ ಕಾಮತ್(ಸಂ), **ಪೂರ್ವೋಕ್ತ,** ೧೯೮೪, ಪು.೨೯೫

೮. ತಂಬಂಡ ವಿಜಯ್ ಪೂಣಚ್ಚ (ಸಂ) **ಚರಿತ್ರೆ ವಿಶ್ವಕೋಶ,** ಸಂಪುಟ ೪, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೧, ಪು.೭೯೪

೯. ಗೋವಿಂದರಾಜು ಸಿ.ಆರ್., **ಕರ್ನಾಟಕ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೧೯೯೫, ಪು.೨೨

೧೦. ಗೋಪಾಲರಾವ್ ಎಚ್.ಎಸ್.(ಸಂ), **ನಮ್ಮನಾಡು ಕರ್ನಾಟಕ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೩, ಪು.೧೦೦

೧೧. ಗೋಪಾಲರಾವ್ ಎಚ್.ಎಸ್ (ಸಂ), **ಕರ್ನಾಟಕ ಏಕೀಕರಣ ಇತಿಹಾಸ,** ನವಕರ್ನಾಟಕ ಪ್ರಕಾಶನ, ಬೆಂಗಳೂರು ೧೯೯೬, ಪು.೧೩೧

೧೨. ಚಂದ್ರಶೇಖರ್ ಎಸ್.(ಸಂ), **ಪೂರ್ವೋಕ್ತ,** ೧೯೯೭, ಪು.೨೨೪

೧೩. ಸೂರ್ಯನಾಥ ಕಾಮತ್, **ಪೂರ್ವೋಕ್ತ,** ೧೯೮೪, ಪು.೨೯೫, ೨೯೬

೧೪. ಚಂದ್ರಶೇಖರ್ ಎಸ್.(ಸಂ), **ಪೂರ್ವೋಕ್ತ,** ೧೯೯೭, ಪು.೨೨೧

೧೫. ಬರಗೂರು ರಾಮಚಂದ್ರಪ್ಪ (ಸಂ), **ಕರ್ನಾಟಕ ಸಂಗಾತಿ,** ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ೨೦೦೨, ಪು.೧೨೫

೧೬. ಚಂದ್ರಶೇಖರ್ ಎಸ್.(ಸಂ), **ಆಧುನಿಕ ಕರ್ನಾಟಕದ ಆಂದೋಲನಗಳು,** ನಮ್ಮ ಪ್ರಕಾಶನ, ಬಿಳಿಗೆರೆ ತಿಪಟೂರು ತಾಲ್ಲೂಕು, ೨೦೦೨, ಪು.೯೪, ೯೫

೧೭. ಚಂದ್ರಶೇಖರ್ ಎಸ್.(ಸಂ), **ಪೂರ್ವೋಕ್ತ,** ೧೯೯೭, ಪು.೨೨೪

೧೮. ಬರಗೂರು ರಾಮಚಂದ್ರಪ್ಪ (ಸಂ), **ಕರ್ನಾಟಕ ಸಂಗಾತಿ,** ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ೨೦೦೨, ಪು.೧೩೯

೧೯. ಚಂದ್ರಶೇಖರ್ ಎಸ್.(ಸಂ), **ಪೂರ್ವೋಕ್ತ,** ೧೯೯೭, ಪು.೨೨೮

೨೦. ಅದೇ, ಪು.೨೨೮, ೨೩೦

೨೧. ಚಂದ್ರಶೇಖರ್ ಎಸ್., **ಆಧುನಿಕ ಕರ್ನಾಟಕದ ಆಂದೋಲನಗಳು,** ನಮ್ಮ ಪ್ರಕಾಶನ, ಬಿಳಿಗೆರೆ(ತಿಪಟೂರು ತಾಲ್ಲೂಕು), ೨೦೦೨, ಪು.೯೮

೨೨. ಗೋಪಾಲರಾವ್ ಎಚ್.ಎಸ್.(ಸಂ), **ಕರ್ನಾಟಕ ಏಕೀಕರಣ ಇತಿಹಾಸ,** ನವಕರ್ನಾಟಕ ಪ್ರಕಾಶನ, ೧೯೯೬, ಪು.೨೧೦

೨೩. ಚಂದ್ರಶೇಖರ್ ಎಸ್., **ಪೂರ್ವೋಕ್ತ,** ೨೦೦೨, ಪು.೧೦೧

೨೪. ಸೂರ್ಯನಾಥ ಕಾಮತ್, **ಪೂರ್ವೋಕ್ತ,** ೨೯೮೪, ಪು.೨೯

೫

# ಸಮಾರೋಪ

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಹಾಗೂ ಇಪ್ಪತ್ತನೆಯ ಶತಮಾನವು ಚರಿತ್ರೆಯ ಬರವಣಿಗೆಯ ದೃಷ್ಟಿಯಿಂದ ಕ್ರಾಂತಿಕಾರಿಯುಗವೆಂದರೆ ಅತಿಶಯೋಕ್ತಿಯಾಗಲಾರದು. ಈ ಅವಧಿಯಲ್ಲಿ ಚರಿತ್ರೆ ರಚನೆಯಲ್ಲಿ ವೈಜ್ಞಾನಿಕ ಚಿಂತನೆಗಳು ಕಾಣಿಸಿಕೊಂಡವು. ಕಾಲಿಂಗ್‌ವುಡ್ ರವರ `ದಿ ಐಡಿಯಾ ಆಫ್ ಹಿಸ್ಟರಿ', ಇ.ಎಚ್ .ಕಾರ್ ರವರ `ವಾಟ್ ಈಸ್ ಹಿಸ್ಟರಿ' ಮುಂತಾದ ಕೃತಿಗಳು ಚರಿತ್ರೆ ಲೇಖನ ಶಾಸ್ತ್ರವನ್ನು ಕುರಿತು ಮಹತ್ವದ ಮಾಹಿತಿ ನೀಡುತ್ತವೆ. ಒಂದು ಪ್ರದೇಶದ ಚರಿತ್ರೆಯನ್ನು ರಚಿಸುವಾಗ ಚರಿತ್ರೆಕಾರ ಹೊಂದಿರಬೇಕಾದ ವಿಭಿನ್ನ ದೃಷ್ಟಿಕೋನಗಳ ಬಗ್ಗೆ ಈ ಕೃತಿಗಳಲ್ಲಿ ಉಲ್ಲೇಖಿಸಲಾಗಿದೆ. ಭಾರತದಲ್ಲಿ ಚರಿತ್ರೆ ರಚನೆಯ ವಿವಿಧ ಆಯಾಮಗಳು ಮತ್ತು ಅವುಗಳ ವೈಶಿಷ್ಟ್ಯಗಳು ಬೆಳವಣಿಗೆಯಾಗಲು ವಸಾಹತುಶಾಹಿ ಹಾಗೂ ವಸಾಹತೋತ್ತರ ಕಾಲವು ಉತ್ತಮ ಅವಕಾಶಗಳನ್ನು ಒದಗಿಸಿತೆನ್ನಬಹುದು.

ಇತ್ತೀಚಿನ ದಿನಗಳಲ್ಲಿ ಸ್ಥಳೀಯ ಚರಿತ್ರೆಯ ಅಧ್ಯಯನ ಹೆಚ್ಚು ಮಹತ್ವ ಪಡೆಯುತ್ತಿದೆ. ಸ್ಥಳೀಯ ಚರಿತ್ರೆಯನ್ನು ಅಧ್ಯಯನ ನಡೆಸುವಲ್ಲಿ ಲಿಖಿತ ಮತ್ತು ಮೌಖಿಕ ಆಕರಗಳು ಸಹಕಾರಿಯಾಗಿವೆ. ಪ್ರತಿಯೊಂದು ಪ್ರದೇಶಕ್ಕೂ ತನ್ನದೇ ಆದ ಚರಿತ್ರೆಯಿದ್ದೇ ಇರುತ್ತದೆ, ಈ ಹಿನ್ನಲೆಯಲ್ಲಿ ತುಮಕೂರು ಪ್ರದೇಶದ ಚರಿತ್ರೆ ನಿರ್ಮಾಣಗೊಂಡ ಬಗೆಯ ಕುರಿತು ವಿವರಿಸಲಾಗಿದೆ. ಸೀಮಿತ ಪರಿದಿಗೆ ಒಳಪಟ್ಟ ಸ್ಥಳೀಯ ಚರಿತ್ರೆಯನ್ನು ಅಧ್ಯಯನ ನಡೆಸುವ ಉದ್ದೇಶವಾದರೂ ಏನು ಎಂಬ ಪ್ರಶ್ನೆಗೆ ಉತ್ತರವೆಂಬಂತೆ ಚರಿತ್ರೆಯ ಎಲ್ಲ ಕಾಲಘಟ್ಟದಲ್ಲಿ ಈ ಪ್ರದೇಶವು ನಿರ್ವಹಿಸಿದ ಪಾತ್ರವನ್ನು ಸೂಕ್ಷ್ಮವಾಗಿ ಅವಲೋಕಿಸಲಾಗಿದೆ. ಸಾಮ್ರಾಜ್ಯಶಾಹಿ ಹಾಗೂ ರಾಷ್ಟ್ರೀಯವಾದಿ ಚರಿತ್ರೆಕಾರರು ಅರಸ ಕೇಂದ್ರಿತ ಹಾಗೂ ಧರ್ಮಕೇಂದ್ರಿತ ವಿಚಾರಗಳಿಗೆ ಮನ್ನಣೆ ನೀಡಿ ಮೇಲ್ವರ್ಗವನ್ನು ವೈಭವೀಕರಿಸುವ ಪ್ರಯತ್ನ ನಡೆಸಿದರು. ಪ್ರಭುತ್ವದಡಿಯಲ್ಲಿ ಬದುಕಿದ್ದ ಜನರ ಚರಿತ್ರೆ ಇಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಯಿತು. ಸ್ಥಳೀಯ ಚರಿತ್ರೆಯ ಅಧ್ಯಯನದಿಂದ ಕೆಳಸ್ತರದ ನಿರ್ಲಕ್ಷ್ಯಕ್ಕೆ ಒಳಗಾದ ಜನತೆಗೆ ನ್ಯಾಯ ಒದಗಿಸಲು ಸಾಧ್ಯವಿದೆ ಎನ್ನಬಹುದು. ಆದರೂ ಸ್ಥಳೀಯ ಚರಿತ್ರೆ ಎಷ್ಟರಮಟ್ಟಿಗೆ ಸ್ಥಳೀಯ ಎನ್ನುವ ಪ್ರಶ್ನೆಯೂ ಇದೆ. ಇದು ಅಧ್ಯಯನ ವಿಧಾನದಲ್ಲಿನ ತೊಡಕು. ಅತಿಯಾದ ವ್ಯಾಮೋಹದಿಂದ ಸ್ಥಳೀಯ ಚರಿತ್ರೆ ನಿರ್ಮಾಣಗೊಂಡರೆ ಅದು ಸ್ಥಳೀಯವಾಗಿರಲು ಸಾಧ್ಯವೇ ಇಲ್ಲ. ಇದು ಸ್ಥಳೀಯ ಚರಿತ್ರೆ ಅಧ್ಯಯನದ ಮಿತಿಯೂ ಹೌದು.

ತುಮಕೂರು ಪ್ರದೇಶದ ಚರಿತ್ರೆಯನ್ನು ವಿವಿಧ ಕೃತಿಗಳನ್ನು ಅವಲೋಕಿಸುವುದರ ಮೂಲಕ ಅಧ್ಯಯನ ಮಾಡಲಾಗಿದೆ. ಈ ಪ್ರದೇಶವು ಪ್ರಾಗೈತಿಹಾಸಿಕ ಕಾಲದ ಮಾನವನ ನೆಲೆಯಾಗಿತ್ತು ಎಂಬುದನ್ನು ಪತ್ತೆ ಹಚ್ಚಲಾಗಿದ್ದು, ಚರಿತ್ರೆಕಾರರು ತಮ್ಮ ಕೃತಿಗಳಲ್ಲಿ ದಾಖಲಿಸಿದ್ದಾರೆ. ಕೇಂದ್ರ ಸರ್ಕಾರದ ಪುರಾತತ್ವ ಇಲಾಖೆಯು ನಡೆಸಿದ ಉತ್ಖನನಗಳಿಂದ ಪ್ರತಿಯೊಂದು ಹಳ್ಳಿಯಲ್ಲಿಯೂ ಇರುವಂತಹ ಶಿಲಾಯುಗದ ಪ್ರಕಾರಗಳನ್ನು ಸಂಶೋಧನೆಗೆ ಒಳಪಡಿಸಲಾಗಿದೆ. ರಾಬರ್ಟ್‌ಬ್ರೂಸ್ ಪೂಟ್, ಆರ್.ಎಲ್.ಕೋಲ್‌ರಂತಹ ಆಂಗ್ಲ ವಿದ್ವಾಂಸರು, ಅ.ಸುಂದರ, ಬಿ.ನರಸಿಂಹಯ್ಯ, ಎಂ.ಶೇಷಾದ್ರಿ, ಅಲ್ಚಿನ್, ಎಸ್.ಶ್ರೀಕಂಠಶಾಸ್ತ್ರಿ ಮುಂತಾದವರು ಶಿಲಾಯುಗ ಸಂಸ್ಕೃತಿಯ ಮಾನವನ ನೆಲೆಗಳನ್ನು ಪತ್ತೆಹಚ್ಚಿದ್ದಾರೆ. ಕೆ.ಬಿ.ಶಿವತಾರಕ್‌ರವರ 'ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು' ಎಂಬ ಮಹಾಪ್ರಬಂಧವು ಶಿಲಾಯುಗ ಸಂಸ್ಕೃತಿಯ ಬಗ್ಗೆ ಮಾಹಿತಿ ಒದಗಿಸುತ್ತದೆ. ಶಿಲಾಯುಗದ ಮಾನವನು ಬಳಸುತ್ತಿದ್ದ ಉಪಕರಣಗಳಲ್ಲಿ ಮಾಡಿಕೊಂಡ ಬದಲಾವಣೆ ಮತ್ತು ಅವನ ಜೀವನ ಶೈಲಿಯಲ್ಲಿ ಆದ ಬದಲಾವಣೆಯು ಸಂಸ್ಕೃತಿ ವಿಸ್ತರಣೆಯನ್ನು ತಿಳಿಯಲು ಸಹಾಯಕವಾಗಿದೆ. ಈ ಶಿಲಾಯುಗ ಸಂಸ್ಕೃತಿಯನ್ನು ಹಳೆ ಶಿಲಾಯುಗ, ಮಧ್ಯ ಶಿಲಾಯುಗ, ನೂತನ ಶಿಲಾಯುಗ, ಸೂಕ್ಷ್ಮ ಶಿಲಾಯುಗ ಹಾಗೂ ಕಬ್ಬಿಣ ಯುಗವೆಂದು ವಿಂಗಡಿಸಲಾಗಿದೆ. ಆದರೆ ಈ ಹಂತಗಳ ಕಾಲಮಾನವನ್ನು ನಿರ್ಧರಿಸುವಲ್ಲಿ ಸ್ಪಷ್ಟತೆ ಕಂಡುಬಂದಿಲ್ಲ. 'ಪುರಾತತ್ವ ಸಂಶೋಧನೆ ಮತ್ತು ಅಧ್ಯಯನಗಳ ಪಿತಾಮಹ'ರೆನಿಸಿದ ರಾಬರ್ಟ್‌ಬ್ರೂಸ್ ಪೂಟ್ ರಂತಹವರೇ ಇದರಲ್ಲಿ ವಿಫಲರಾಗಿದ್ದಾರೆ. ಕಿಬ್ಬನಹಳ್ಳಿಯನ್ನು ಕರ್ನಾಟಕ ಪ್ರಾಗೈತಿಹಾಸಿಕ ನೆಲೆಗಳಲ್ಲೆ ಗಮನಾರ್ಹವಾದುದು ಎಂದು ತಿಳಿಸಲಾಗಿದೆ. ಇದೇ ಭಾಗದಲ್ಲಿರುವ ಬಿಳಿಗೆರೆ, ಬಾಣಸಂದ್ರದ ಬೆಟ್ಟದ ಸಾಲಿನಲ್ಲಿರುವ ಪುರಾತತ್ವ ಕುರುಹುಗಳ ಬಗ್ಗೆ ಹೆಚ್ಚಿನ ಅಧ್ಯಯನ ನಡೆಯಬೇಕಿದೆ.

ತುಮಕೂರು ಪ್ರದೇಶವು ಪ್ರಾಚೀನ ಕಾಲದಿಂದಲೂ ಹಲವು ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿರುವುದು ಹಲವು ಚಾರಿತ್ರಿಕ ಕೃತಿಗಳಲ್ಲಿ ದಾಖಲಾಗಿದೆ. ಈ ಭಾಗದಲ್ಲಿ ದೊರೆತ ಶಾಸನಗಳು, ದೇವಾಲಯಗಳು, ಕೋಟೆ-ಕೊತ್ತಲುಗಳು, ಕೆರೆ-ಕುಂಟೆಗಳು, ವೀರಗಲ್ಲು ಮತ್ತು ಮಹಾಸತಿಕಲ್ಲುಗಳು ಚರಿತ್ರೆಕಾರರ ಅಧ್ಯಯನಕ್ಕೆ ಸಹಾಯಕವಾಗಿವೆ. ಇತಿಹಾಸ ಆರಂಭ ಕಾಲದ ಮೌರ್ಯ, ಶಾತವಾಹರ ಆಡಳಿತಕ್ಕೆ ಈ ಪ್ರದೇಶ ಒಳಪಟ್ಟಿತ್ತು ಎಂಬ ವಾದಗಳಿವೆ. ಆದರೆ ಸ್ಪಷ್ಟ ಪುರಾವೆಗಳು ಲಭ್ಯವಿಲ್ಲ. ಪ್ರಾಚೀನ ರಾಜಮನೆತನಗಳಾದ ತಲಕಾಡಿನ ಗಂಗರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ನೊಳಂಬರು, ಚೋಳರು ಆಳ್ವಿಕೆ ಮಾಡಿರುವುದನ್ನು ಹಲವು ಚಾರಿತ್ರಿಕ ಕೃತಿಗಳಲ್ಲಿ ವಿವರಿಸಲಾಗಿದೆ. ಬಿ.ಎಲ್.ರೈಸ್ ರವರ ಶಾಸನ ಸಂಪುಟ.೧೨, ಮೈಸೂರು ಗೆಜೆಟಿಯರ್ ಸಂಪುಟ ೨, ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್' ಸೂರ್ಯನಾಥ ಕಾಮತ್‌ರವರ 'ಕರ್ನಾಟಕ ರಾಜ್ಯ ಗೆಜೆಟಿಯರ್' ಭಾಗ ೧ ಮುಂತಾದವು ಈ ರಾಜಮನೆತನಗಳ ಅಧ್ಯಯನಕ್ಕೆ ನೆರವಾಗಿವೆ.

ತುಮಕೂರು ಪ್ರದೇಶದಲ್ಲಿ ಪ್ರಾಚೀನ ರಾಜಕೀಯ ಚರಿತ್ರೆಯು ತಲಕಾಡಿನ ಗಂಗರ ಆಳ್ವಿಕೆಯಿಂದ ಆರಂಭವಾಗುತ್ತದೆ ಎಂದು ತಿಳಿಸಲಾಗಿದೆ. ಈ ಪ್ರದೇಶವನ್ನು ಆಳಿದ ಗಂಗರಸರಲ್ಲೆ ಶ್ರೀಪುರುಷ ಮೊದಲಿಗ ಎಂಬುದಾಗಿ ಗೆಜೆಟಿಯರ್‌ನಲ್ಲಿ ತಿಳಿಸಲಾಗಿದೆ. ಗಂಗರ ಇತಿಹಾಸವನ್ನು ತಿಳಿಸುವ ಹಲವು ಕೃತಿಗಳು ಶಾಸನ ಸಂಪುಟಗಳನ್ನು ಆಧರಿಸಿಯೇ ರಚನೆಯಾಗಿವೆ. ತುಮಕೂರು ಪ್ರದೇಶದಲ್ಲಿ ಗಂಗರಸರ ಆಳ್ವಿಕೆಯ ಕುರಿತಾಗಿ ಸಮಗ್ರ ಚಿತ್ರಣವನ್ನು ನೀಡುವಂತ ಕೃತಿ ರಚನೆಯಾಗಿಲ್ಲ ಎನ್ನಬಹುದು. ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟರವರ 'ಕರ್ನಾಟಕ ಇತಿಹಾಸ ದರ್ಶನ', ತಿಪ್ಪೆರುದ್ರಸ್ವಾಮಿರವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ', ಎಂ.ಎಸ್.ನಂಜುಂಡಸ್ವಾಮಿರವರ 'ಕದಂಬ-ಗಂಗರ ಇತಿಹಾಸ', ಡಿ.ಎನ್.ಯೋಗೀಶ್‌ರವರ ಸಂಪಾದಕತ್ವದ 'ಜಯಮಂಗಲಿ' ಸ್ಮರಣ ಸಂಚಿಕೆ, ಸಿ.ಎನ್.ಬಾಸ್ಕರಪ್ಪನವರ ಸಂಪಾದಕತ್ವದ 'ತುಮಕೂರು ಜಿಲ್ಲಾ ದರ್ಶನ', ಸೂರ್ಯನಾಥ ಕಾಮತ್‌ರವರ 'ಕರ್ನಾಟಕದ ಸಂಕ್ಷಿಪ್ತ ಇತಿಹಾಸ' ಮುಂತಾದ ಹಲವು ಕೃತಿಗಳು ಗಂಗರಸರ ಆಳ್ವಿಕೆಗೆ ಒಳಗೊಂಡಂತೆ ತುಮಕೂರು ಪ್ರದೇಶದಲ್ಲಿ ಆಡಳಿತವನ್ನು ವಿಸ್ತರಿಸಿದ್ದ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಚೋಳರ ಕುರಿತು ವಿವರಣೆ ನೀಡುತ್ತವೆ. ಆದರೆ ಈ ಕೃತಿಗಳಲ್ಲಿ ರಾಜಕೀಯ ವಿಚಾರಗಳಿಗೆ ಹೆಚ್ಚು ಮನ್ನಣೆ ನೀಡಲಾಗಿದೆ. ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಅಂಶಗಳು ನಿರ್ಲಕ್ಷ್ಯಕ್ಕೆ ಒಳಗಾಗಿವೆ ಎಂದರೆ ತಪ್ಪಾಗಲಾರದು.

ಚರಿತ್ರೆ ಅಧ್ಯಯನದ ಎರಡನೆಯ ಭಾಗವಾಗಿ ಕಂಡುಬಂದಿರುವ ಮಧ್ಯಕಾಲೀನ ಚರಿತ್ರೆಯು ಹೊಯ್ಸಳರ ಆಳ್ವಿಕೆಯೊಂದಿಗೆ ಪ್ರಾರಂಭವಾಗುತ್ತದೆ. ನಂತರ ಇದೇ ಚಾರಿತ್ರಿಕ ಕಾಲಘಟ್ಟದಲ್ಲಿ ವಿಜಯನಗರದ ಅರಸರು, ಬಿಜಾಪುರದ ಸುಲ್ತಾನರು, ಮೊಗಲರು, ಮರಾಠರು, ಪಾಳೆಯಗಾರರು, ಮೈಸೂರು ಒಡೆಯರುಗಳು ಆಳ್ವಿಕೆ ನಡೆಸಿರುವುದು ತಿಳಿದುಬರುತ್ತದೆ. ತುಮಕೂರು ಪ್ರದೇಶವು ಒಂದಲ್ಲ ಒಂದು ರೀತಿಯಲ್ಲಿ ಈ ಅರಸು ಮನೆತನಗಳ ಆಡಳಿತಕ್ಕೆ ಒಳಪಟ್ಟಿರುವುದು ಬಿ.ಎಲ್.ರೈಸ್‌ರವರ ಶಾಸನ ಸಂಪುಟ ೧೨, ಕೆ.ಅಭಿಶಂಕರರವರ ಸಂಪಾದಕತ್ವದ 'ತುಮಕೂರು ಜಿಲ್ಲಾ ಗೆಜೆಟಿಯರ್'ನಲ್ಲಿ ಉಲ್ಲೇಖಿತವಾಗಿದೆ. ಈ ಅರಸು ಮನೆತನಗಳ ಚರಿತ್ರೆಯನ್ನು ಕುರಿತು ರಚನೆಯಾಗಿರುವ ಬಹುತೇಕ ಕೃತಿಗಳು ಶಾಸನ ಸಂಪುಟಗಳನ್ನು ಅವಲಂಬಿಸಿವೆ. ಷೇಕ್ ಅಲಿ ಅವರ ಪ್ರಧಾನ ಸಂಪಾದಕತ್ವದ ಕರ್ನಾಟಕ ಚರಿತ್ರೆ ಸಂಪುಟಗಳು, ಬಾ.ರಾ.ಗೋಪಾಲ ಅವರ 'ಕರ್ನಾಟಕ ಇತಿಹಾಸ', ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ ಅವರ 'ಕರ್ನಾಟಕ ಇತಿಹಾಸ ದರ್ಶನ', ಸಿ.ಎನ್.ಬಾಸ್ಕರಪ್ಪನವರ ಸಂಪಾದಕತ್ವದ 'ತುಮಕೂರು ಜಿಲ್ಲಾದರ್ಶನ', ಡಿ.ಎನ್.ಯೋಗೀಶ್ ಅವರ ಸಂಪಾದಕತ್ವದ 'ಜಯಮಂಗಲಿ' ಸ್ಮರಣ ಸಂಚಿಕೆ ಮೊದಲಾದವು ಅಧ್ಯಯನಕ್ಕೆ ನೆರವಾಗಿವೆ.

ಹೊಯ್ಸಳರ ಅರಸರುಗಳಾದ ವಿನಯಾದಿತ್ಯ, ವಿಷ್ಣುವರ್ಧನರ ಕಾಲದ ಶಾಸನಗಳು ತುಮಕೂರು ಪ್ರದೇಶದಲ್ಲಿ ಕಂಡುಬಂದಿದ್ದು ಇವರ ಅಧಿಕಾರವ್ಯಾಪ್ತಿ ಈ ಪ್ರದೇಶದಲ್ಲಿ ವಿಸ್ತರಿಸಿತ್ತು ಎಂಬ ನಿಲುವಿಗೆ ಬರಬಹುದು. ಈ ಭಾಗದಲ್ಲಿ ವ್ಯಾಪಿಸಿದ್ದ ಚೋಳರ ಅಧಿಪತ್ಯವನ್ನು ಕೊನೆಗಾಣಿಸಲಾಯಿತು.

ವಿಷ್ಣುವರ್ಧನನು ರಾಷ್ಟ್ರಕೂಟರಿಂದ ಗಂಗವಾಡಿ ಮತ್ತು ನೊಳಂಬವಾಡಿಗಳನ್ನು ವಶಪಡಿಸಿಕೊಂಡನು. ನೊಳಂಬವಾಡಿ ಪ್ರಾಂತ್ಯಕ್ಕೆ ಸೇರಿದ್ದ ತುಮಕೂರು ಪ್ರದೇಶ ಹೊಯ್ಸಳ ರಾಜ್ಯದಲ್ಲಿ ಸೇರ್ಪಡೆಯಾಗಿರುವುದರಲ್ಲಿ ಯಾವುದೇ ಸಂದೇಹವಿಲ್ಲ, ಹೊಯ್ಸಳರ ಕೊನೆಯ ಅರಸ ವಿರೂಪಾಕ್ಷನ ಅಸಮರ್ಥತೆಯಿಂದಾಗಿ ರಾಜ್ಯವು ವಿಜಯನಗರ ಸಾಮ್ರಾಜ್ಯದಲ್ಲಿ ವಿಲೀನವಾಯಿತು. ಅದರ ಭಾಗವಾಗಿದ್ದ ತುಮಕೂರು ಪ್ರದೇಶವು ವಿಜಯನಗರ ಅರಸರ ಆಳ್ವಿಕೆಗೆ ಒಳಗಾಯಿತು.

ಕ್ರಿ.ಶ.೧೯೦೧ರಲ್ಲಿ ರಾಬರ್ಟ್‌ಸಿವೆಲ್ ರಚಿಸಿದ 'ಎ ಫರ್‌ಗಾಟನ್ ಎಂಪೈಯರ್' ಕೃತಿಯು ವಿಜಯನಗರ ಸಾಮ್ರಾಜ್ಯದ ಚರಿತ್ರೆಯ ಮೇಲೆ ಬೆಳಕು ಚೆಲ್ಲಿದ ಮೊದಲ ಕೃತಿಯಾಗಿದೆ. ಇದರ ಫಲಿತವಾಗಿ ನೂರಾರು ಕೃತಿಗಳು ಹೊರಬಂದವು. ವಿಜಯನಗರ ಸ್ಥಾಪಕರಾದ ಹರಿಹರ ಮತ್ತು ಬುಕ್ಕರಾಯರ ಕಾಲದ ಕೆಲವು ಶಾಸನಗಳು ತುಮಕೂರು ಪ್ರದೇಶದಲ್ಲಿ ದೊರೆತಿವೆ. ವಿಜಯನಗರ ಅರಸರು ದಾನ-ದತ್ತಿ ನೀಡಿದ, ಹೊಸ ಹಳ್ಳಿ, ಕೆರೆ-ಕುಂಟೆಗಳನ್ನು ನಿರ್ಮಿಸಿರುವ ವಿಚಾರ ಶಾಸನಗಳಿಂದ ಸ್ಪಷ್ಟಪಡುತ್ತದೆ. ಹಲವು ಪಾಳೆಯಗಾರರಿಗೆ ಇವರು ಆಶ್ರಯದಾತರಾಗಿದ್ದರು ಎಂಬುದು ಪಾಳೆಯಗಾರರ ಕುರಿತಾದ ಕೃತಿಗಳಿಂದ ತಿಳಿದುಬರುತ್ತದೆ. ವಿಜಯನಗರ ವಿನಾಶದ ನಂತರ ಬಿಜಾಪುರ ಸುಲ್ತಾನರು ಮತ್ತು ಮೊಗಲರು ಪ್ರಾಬಲ್ಯ ಹೊಂದಿದಾಗ ತುಮಕೂರು ಪ್ರದೇಶವು ಅವರ ರಾಜಕೀಯಗಾಳಕ್ಕೆ ಸಿಲುಕಿತು. ಬಿಜಾಪುರದ ಆದಿಲ್ ಷಾಹಿಗಳ ಆಳ್ವಿಕೆಯಿಂದಾಗಿ ಸಿರಾದಲ್ಲಿ ನವಾಬರ ಆಡಳಿತ ಆರಂಭವಾಯಿತು. ಮೊಗಲರು ಮತ್ತು ಮರಾಠರು ಮೈಸೂರು ಸಂಸ್ಥಾನವನ್ನು ಹಿಡಿತಕ್ಕೆ ತೆಗೆದುಕೊಳ್ಳುವಲ್ಲಿ ಹೋರಾಟ ನಡೆಸಿ, ಅದಕ್ಕೆ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ತೋರಿದ ಪ್ರತಿರೋಧವನ್ನು ಹಲವು ಕೃತಿಗಳು ವಿವರಿಸುತ್ತವೆ ಎಂಬುದನ್ನು ಅಧ್ಯಯನ ಭಾಗದಲ್ಲಿ ತಿಳಿಸಲಾಗಿದೆ.

ತುಮಕೂರು ಪ್ರದೇಶದ ಚರಿತ್ರೆ ಅಧ್ಯಯನದಲ್ಲಿ ಪಾಳೆಯಗಾರರ ಅಧ್ಯಾಯವು ಪ್ರಾಮುಖ್ಯತೆ ಪಡೆದಿದೆ. ನಿಡಗಲ್ಲು ಪಾಳೆಯಗಾರರು, ಪಾವಗಡ ಪಾಳೆಯಗಾರರು, ರತ್ನಗಿರಿ ಪಾಳೆಯಗಾರರು, ಹಾಗಲವಾಡಿ ಪಾಳೆಯಗಾರರು, ಗುಬ್ಬಿ ಹೊಸಹಳ್ಳಿ ಪಾಳೆಯಗಾರರು, ಸಿರಾದ ಪಾಳೆಯಗಾರರು, ಬಿಜ್ಜಾವರದ ಮಹಾನಾಡ ಪ್ರಭುಗಳು ಮುಂತಾದ ಪಾಳೆಯಪಟ್ಟುಗಳು ವಿಜಯನಗರೋತ್ತರ ಕಾಲದಲ್ಲಿ ಪ್ರಾದೇಶಿಕ ಚರಿತ್ರೆಯಲ್ಲಿ ಶ್ರೇಷ್ಠತೆಯನ್ನು ಪಡೆದವು. ತಮ್ಮ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಮರಾಠರು, ಮೊಘಲರೊಂದಿಗೆ ಹೋರಾಡಿ ನಂತರ ಬ್ರಿಟಿಷರ ಕುಟಿಲ ತಂತ್ರಗಳಿಗೆ ಬಲಿಪಶುಗಳಾಗಿ ಮತ್ತೆ ಸ್ವಾತಂತ್ರ್ಯವನ್ನು ಪಡೆಯಲು ಹವಣಿಸಿದ ರೀತಿ ಗಮನಾರ್ಹವಾದುದ್ದಾಗಿದೆ. ಕೆ.ಅಭಿಶಂಕರರವರ 'ತುಮಕೂರು ಜಿಲ್ಲಾ ಗೆಜೆಟಿಯರ್' ಎಂ.ವಿ.ವಸು ಅವರ 'ದಕ್ಷಿಣ ಕರ್ನಾಟಕದ ಅರಸು ಮನೆತನಗಳು', ಎಂ.ಎಂ.ಕಲಬುರ್ಗಿ ಅವರ 'ಬಿಜ್ಜಾವರ ಮಹಾನಾಡ ಪ್ರಭುಗಳು', ಡಿ.ಎನ್.ಯೋಗೀಶ್ವರಪ್ಪ ಅವರ 'ಹಾಗಲವಾಡಿ ಅಮರ ನಾಯಕರು', ಆರ್.ಕಾವಲಮ್ಮ ಅವರ 'ಮಧುಗಿರಿ ಮಹಾನಾಡ ಪ್ರಭುಗಳು' ಮುಂತಾದವು ಪಾಳೆಯಗಾರರ ಅಧ್ಯಯನಕ್ಕೆ ನೆರವಾಗಿವೆ.

ಕ್ರಿ.ಶ.೧೭೯೯ರ ನಾಲ್ಕನೆ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಪತನದೊಂದಿಗೆ ಮೈಸೂರು ಸಂಸ್ಥಾನದಲ್ಲಿ ಬ್ರಿಟಿಷರ ಅಧಿಕಾರ ಸ್ಥಾಪನೆಯಾಯಿತು. ಅದರಂತೆ ಮೈಸೂರು ಸಂಸ್ಥಾನದ ಭಾಗವಾಗಿದ್ದ ತುಮಕೂರು ಪ್ರದೇಶಕ್ಕೂ ಬ್ರಿಟಿಷರ ಅಧಿಪತ್ಯ ವಿಸ್ತರಣೆಗೊಂಡಿತು. ತುಮಕೂರು ಪ್ರದೇಶದಲ್ಲಿ ವಸಾಹತುಶಾಹಿ ಆಳ್ವಿಕೆಯನ್ನು ಕುರಿತು ಬಂದ ಕೃತಿಗಳು ಅತ್ಯಲ್ಪ. ಸೂರ್ಯನಾಥ ಕಾಮತ್ ರವರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು', ಸಂಪುಟ-೨, ಕೆ.ವೀರತಪ್ಪನವರ 'ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ', ಸಿದ್ದವ್ವನಹಳ್ಳಿ ಕೃಷ್ಣಶರ್ಮರವರ 'ಗಾಂಧಿ ಮತ್ತು ಕರ್ನಾಟಕ', ಎಸ್.ಚಂದ್ರಶೇಖರ್ ರವರ 'ದಕ್ಷಿಣ ಭಾರತದ ವಸಹಾತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ' ಮುಂತಾದ ಕೃತಿಗಳನ್ನು ಗಮನಿಸಲಾಗಿದೆ. ಆದರೂ ಮುಖ್ಯವಾಹಿನಿಯಲ್ಲಿ ಬಂದ ಕೃತಿಗಳಲ್ಲಿ ತುಮಕೂರು ಪ್ರದೇಶದ ಹೋರಾಟವನ್ನು ನಿರ್ಲಕ್ಷಿಸಿರುವುದು ವ್ಯಕ್ತವಾಗುತ್ತದೆ. ೧೮೮೧ರಲ್ಲಿ ಮೈಸೂರು ಸಂಸ್ಥಾನದಲ್ಲಿ ದಿವಾನ್ ರಂಗಾಚಾರ್ಲು ``ಪ್ರಜಾಪ್ರತಿನಿಧಿ ಸಭೆ"ಯನ್ನು ಸ್ಥಾಪಿಸಿದರು. ಇದು ಭಾರತದಲ್ಲೆ ಮೊಟ್ಟಮೊದಲ ಬಾರಿಗೆ ಪ್ರಜಾಪ್ರಭುತ್ವ ಸ್ಥಾಪನೆಗೆ ತಳಹದಿ ಹಾಕಿದಂತಾಯಿತು. ೧೯೨೦ರಲ್ಲಿ ಗಾಂಧೀಜಿಯವರು ಕರೆ ನೀಡಿದ ಅಸಹಕಾರ ಚಳುವಳಿಗೆ ತುಮಕೂರು ಪ್ರದೇಶದಲ್ಲಿ ವ್ಯಾಪಕ ಬೆಂಬಲ ವ್ಯಕ್ತವಾಯಿತು. ಕಾನೂನು ಭಂಗ ಚಳುವಳಿಯಂತಹ ಸಂದರ್ಭದಲ್ಲಿ ತುಮಕೂರು ಜಿಲ್ಲೆಯಲ್ಲಿ ನಡೆದ ಪಾನವಿರೋಧ ಚಳುವಳಿ ಬೇರೆ ಭಾಗದ ಜನರಿಗೆ ಸ್ಫೂರ್ತಿ ನೀಡಿತು. ಗಾಂಧೀಜಿಯವರು ತುಮಕೂರು ಪ್ರದೇಶದಲ್ಲಿ ಪ್ರವಾಸ ಕೈಗೊಂಡು ನಡೆಸಿದ ರಚನಾತ್ಮಕ ಕಾರ್ಯಗಳ ಪ್ರಚಾರಕ್ಕೆ ಹೆಚ್ಚು ಮನ್ನಣೆ ದೊರೆಯಿತು. ಜನರ ಮನಸ್ಸಿನ ಮೇಲೆ ಪ್ರಭಾವ ಬೀರಿತು ಎಂದು ಸಿದ್ದವ್ವನಹಳ್ಳಿ ಕೃಷ್ಣಶರ್ಮರವರು 'ಗಾಂಧಿ ಮತ್ತು ಕರ್ನಾಟಕ' ಎಂಬ ಕೃತಿಯಲ್ಲಿ ತಿಳಿಸಿರುವುದು ಗಮನಾರ್ಹ ಅಂಶವಾಗಿದೆ. 'ಕ್ವಿಟ್ ಇಂಡಿಯಾ ಚಳುವಳಿ'ಯಂತಹ ನಿರ್ಣಾಯಕ ಹೋರಾಟದ ಸಂದರ್ಭದಲ್ಲಿ ವಿದ್ಯಾರ್ಥಿಗಳು, ಕಾರ್ಮಿಕರು, ರೈತರು, ಮಹಿಳೆಯರು ಮುಂತಾದ ಎಲ್ಲ ವರ್ಗದ ಜನ ಸ್ಪಂದಿಸಿದರು.

೧೯೪೭ರಲ್ಲಿ ಭಾರತ ಸ್ವತಂತ್ರಗೊಂಡು ಪ್ರಜಾಪ್ರಭುತ್ವ ಸರ್ಕಾರ ಸ್ಥಾಪನೆಯಾಯಿತಾದರೂ ಅದರ ಭಾಗವಾಗಿಯೇ ಇದ್ದ ಮೈಸೂರು ಸಂಸ್ಥಾನದಲ್ಲಿ ರಾಜಪ್ರಭುತ್ವವೇ ಮುಂದುವರೆದಿದ್ದು, ಸೋಜಿಗವೆನಿಸುತ್ತದೆ. ಮೈಸೂರು ಚಲೋದಂತಹ ಚಳುವಳಿಗೆ ಇದು ಪ್ರೇರಣೆ ನೀಡಿತು. ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ನಡೆದ ಈ ಚಳುವಳಿಯಲ್ಲಿ ಅಂತಿಮವಾಗಿ ಜನತೆ ಯಶಸ್ಸು ಕಂಡರು.

ಏಕೀಕರಣ ಕಾಲಘಟ್ಟವನ್ನು ವಸಾಹತೋತ್ತರ ಕಾಲವೆಂದು ಪರಿಗಣಿಸಿ ಅಧ್ಯಯನ ನಡೆಸಲಾಗಿದೆ. ಏಕೀಕರಣ ಚಳುವಳಿಯ ಸಂದರ್ಭದಲ್ಲಿ ತುಮಕೂರು ಪ್ರದೇಶವು ಮೈಸೂರು ಸಂಸ್ಥಾನಕ್ಕೆ ಒಳಪಟ್ಟಿತ್ತು. ಸಂಸ್ಥಾನವು ಏಕೀಕರಣ ವಿಷಯವಾಗಿ ತಳೆದ ನಿಲುವುಗಳೇ ಅದರ ವ್ಯಾಪ್ತಿಯ ಎಲ್ಲ ಪ್ರದೇಶಕ್ಕೂ ಅನ್ವಯವಾದವು. ಏಕೀಕರಣ ಚಳುವಳಿಯಲ್ಲಿ ಭಾಗವಹಿಸುವ ಸಂಬಂಧವಾಗಿ ತುಮಕೂರು ಪ್ರದೇಶದ ಜನತೆ ಸ್ವತಂತ್ರ ನಿರ್ಧಾರವನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲದ ಸಂದಿಗ್ಧ ಪರಿಸ್ಥಿತಿಗೆ ಸಿಲುಕಿದ್ದರೆನ್ನಬಹುದು.

ಎಚ್.ಎಸ್.ಗೋಪಾಲರಾವ್‌ರವರ `ಕರ್ನಾಟಕ ಏಕೀಕರಣ ಇತಿಹಾಸ', ಎಸ್.ಚಂದ್ರಶೇಖರ್‌ರವರ 'ಆಧುನಿಕ ಕರ್ನಾಟಕದ ಆಂದೋಲನಗಳು', ಆರ್.ಆರ್.ದಿವಾಕರರವರ 'ಕರ್ನಾಟಕ ಏಕೀಕರಣ ಕಥೆ' ಹಾಗೂ ಸೂರ್ಯನಾಥ ಕಾಮತ್‌ರವರ 'ಕರ್ನಾಟಕ ರಾಜ್ಯ ಗೆಜೆಟಿಯರ್' ಭಾಗ ೧ ಮುಂತಾದವುಗಳಲ್ಲಿ ಏಕೀಕರಣ ಮತ್ತು ಮೈಸೂರು ಸಂಸ್ಥಾನದ ಸಂಬಂಧವನ್ನು ಕುರಿತು ಸುದೀರ್ಘವಾಗಿ ಚರ್ಚಿಸಲಾಗಿದೆ.

ತುಮಕೂರು ಪ್ರದೇಶದ ಕುರಿತು ಬಂದಿರುವ ಕೃತಿಗಳು ಹಾಗೂ ಲೇಖನಗಳು ಸಂಖ್ಯೆಯಲ್ಲಿ ಕಡಿಮೆ ಎಂದೆನಿಸಿದರೂ, ಅವು ನೀಡುವ ವಿವರಣೆಗಳು ಮಹತ್ವದ್ದು, ರಾಷ್ಟ್ರೀಯವಾದಿ ಧೋರಣೆಯ ಹಿನ್ನೆಲೆಯಿರುವ ಕೃತಿಗಳೇ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುವುದರಿಂದ ಸಾಮಾಜಿಕ ಹಾಗೂ ಆರ್ಥಿಕ ಚರಿತ್ರೆ ಕುರಿತ ಮಾಹಿತಿಗಳು ಕಡಿಮೆ ಪ್ರಮಾಣದಲ್ಲಿ ಸಿಗುತ್ತವೆ. ಸ್ಥಳೀಯ ಚರಿತ್ರೆ ನಿರ್ಮಾಣ ಇತ್ತೀಚಿನ ದಿನಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡರೂ, ಈ ಅಧ್ಯಯನ ವಿಧಾನ ಪರಿಪೂರ್ಣವಾದ ಸ್ಥಳೀಯ ಚರಿತ್ರೆಯಾಗಿ ರೂಪುಗೊಂಡಿಲ್ಲ. ಸ್ಥಳೀಯತೆಯನ್ನು ವೈಭವೀಕರಿಸುವ ಪ್ರಯತ್ನಗಳೇ ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿದೆ. ತುಮಕೂರು ಪ್ರದೇಶಕ್ಕೆ ಸಂಬಂಧಿಸಿದಂತೆ ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ನೆಲೆಗಳ ಅಧ್ಯಯನ ಕಂಡುಬರುವುದಿಲ್ಲ. ಈ ಕೊರತೆ ಕರ್ನಾಟಕ ಚರಿತ್ರೆ ರಚನೆ ಸಂದರ್ಭದಲ್ಲೂ ಇದೆ. ಚರಿತ್ರೆಯನ್ನು ಜನರ ಚರಿತ್ರೆಯನ್ನಾಗಿ ಅಥವಾ ಆರ್ಥಿಕ ಚರಿತ್ರೆಯನ್ನಾಗಿ ಪರಿಭಾವಿಸಿ ಅಧ್ಯಯನ ನಡೆಸುವ ತುರ್ತು ಇಂದಿನ ಸಂದರ್ಭದಲ್ಲಿದೆ. ಈ ಎಲ್ಲ ಮಿತಿಗಳ ಮಧ್ಯೆಯೂ ತುಮಕೂರು ಪ್ರದೇಶದ ಚರಿತ್ರೆಯನ್ನು ಪ್ರಾಚೀನ ಸಂದರ್ಭದಿಂದ ಏಕೀಕರಣದವರೆಗೆ ಕಟ್ಟಿಕೊಡುವ ಕೃತಿಗಳು ನಮ್ಮ ಮುಂದೆ ಇವೆ ಎನ್ನುವುದೇ ಸಮಾಧಾನಕರ ಸಂಗತಿ.

# ಪರಾಮರ್ಶನ ಗ್ರಂಥಗಳು


ಕಲಬುರ್ಗಿ ಎಂ.ಎಂ.(ಸಂ), **ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೧೯೯೭

ಕಾಲಿಂಗ್‌ವುಡ್ ಆರ್.ಜಿ., ದಿ ಐಡಿಯಾ ಆಫ್ ಹಿಸ್ಟರಿ, ಕ್ಲಾರಿನ್‌ಡನ್ ಪ್ರೆಸ್, ಆರ್ಕ್ಸ್‌ಫರ್ಡ್, ೧೯೯೩

ಕಾರ್ ಇ.ಎಚ್., **ವಾಟ್ ಈಸ್ ಹಿಸ್ಟರಿ**, ಮ್ಯಾಕ್‌ಮಿಲನ್, ಲಂಡನ್, ೧೯೮೩

ಕಾನ್‌ಫಿಡೆನ್ಸಿಯಲ್ ಕಲೆಕ್ಷನ್, ನಂ.೮೬ : ೮೫, ಇಯರ್ ೧೯೪೫-೪೬

ಕಾವಲಮ್ಮ ಆರ್., **ಮಧುಗಿರಿ ಮಹಾನಾಡ ಪ್ರಭುಗಳು**, ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರ ದೊಡ್ಡಿ, ೨೦೦೫

ಕೃಷ್ಣರಾವ್ ಎಂ.ವಿ., ಮತ್ತು ಕೇಶವಭಟ್ಟ ಎಂ., **ಕರ್ನಾಟಕ ಇತಿಹಾಸ ದರ್ಶನ**, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳೂರು, ೧೯೭೦

ಕೃಷ್ಣಮೂರ್ತಿ ಪಿ.ವಿ. ಮತ್ತು ವಸಂತಲಕ್ಷ್ಮಿ ಕೆ.(ಸಂ), **ಸೂರ್ಯಕೀರ್ತಿ**, ಸೂರ್ಯನಾಥ ಕಾಮತ್, ಅಭಿನಂದನಾ ಗ್ರಂಥ, ಬೆಂಗಳೂರು, ೨೦೦೦

ಗೋಪಾಲ್ ಆರ್.(ಸಂ), **ಕೋಲಾರ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ**, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೪

ಗೋಪಾಲರಾವ್ ಎಚ್.ಎಸ್., **ನಮ್ಮ ನಾಡು ಕರ್ನಾಟಕ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೩.

ಗೋಪಾಲ್‌ರಾವ್ ಎಚ್.ಎಸ್., **ಕರ್ನಾಟಕ ಏಕೀಕರಣ ಇತಿಹಾಸ**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೬

ಗೋವಿಂದರಾಜು ಸಿ.ಆರ್., **ಕರ್ನಾಟಕ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫

ಗೋವಿಂದರಾಜು ಸಿ.ಆರ್., **ಕರ್ನಾಟಕ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ** , ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

ಗೋಪಾಲ ಬಾ.ರಾ, **ಕರ್ನಾಟಕ ಇತಿಹಾಸ**, ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೬

ಚಂದ್ರಶೇಖರ್ ಎಸ್., ದಕ್ಷಿಣ ಭಾರತ ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

ಚಂದ್ರಶೇಖರ್ ಎಸ್ ., ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ, ಬಿಳಿಗೆರೆ (ತಿಪಟೂರು ತಾಲ್ಲೂಕು), ೨೦೦೨

ಚಂದ್ರಶೇಖರ್ ಎಸ್ ., ಕರ್ನಾಟಕ ಚರಿತ್ರೆ ಸಂಪುಟ ೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಚಂದ್ರಶೇಖರಪ್ಪ ಟಿ.ಜಿ., ಭಾರತದ ಇತಿಹಾಸ, ಪೂರ್ಣಪ್ರಕಾಶನ, ಶಿವಮೊಗ್ಗ, ೨೦೦೨

ತಂಬಂಡ ವಿಜಯ್ ಪೂಣಚ್ಚ (ಪ್ರ.ಸಂ), ಚರಿತ್ರೆ ವಿಶ್ವಕೋಶ, ಸಂಪುಟ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ದಿವಾಕರ ಆರ್.ಆರ್., ಕರ್ನಾಟಕ ಪರಂಪರೆ, ಸಂಪುಟ - ೧, ಸಾಹಿತ್ಯ ಸಂಸ್ಕೃತಿ ಇಲಾಖೆ, ಮೈಸೂರು, ೧೯೭೦

ದೇವರಕೊಂಡಾರೆಡ್ಡಿ, ತಲಕಾಡಿನ ಗಂಗರ ದೇವಾಲಯಗಳು : ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೪

ನಂಜುಂಡಸ್ವಾಮಿ ಎಂ.ಎಸ್ ., ಕದಂಬ-ಗಂಗರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ, ೨೦೦೪

ನಾಗರತ್ನಮ್ಮ ಎಸ್., ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂಫಿಲ್ ನಿಬಂಧ, ೧೯೯೬

ನಾಯಕ ಹಾ.ಮ., ಕನ್ನಡ ವಿಶ್ವಕೋಶ, ಸಂಪುಟ ೧, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೯

ನಾಯಕ ಹಾ.ಮ., ಕನ್ನಡ ವಿಶ್ವಕೋಶ, ಸಂಪುಟ ೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೨

ನಾಯಕ ಹಾ.ಮ., ಕನ್ನಡ ವಿಶ್ವಕೋಶ, ಸಂಪುಟ ೯, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೭

ನಾರಾಯಣಚಾರ್ ಕೆ., ಮಧುಗಿರಿ ಚರಿತ್ರೆ, ಪ್ರ.ಬಿ.ವಿ.ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು, ೧೯೪೫

ಬರಗೂರು ರಾಮಚಂದ್ರಪ್ಪ(ಪ್ರ.ಸಂ), ಕರ್ನಾಟಕ ಸಂಗಾತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೦೨

ಪರಮಶಿವಮೂರ್ತಿ ಡಿ.ವಿ, ಸಂಶೋಧನೆಯ ಸಿರಿ, ಗುಣಸಿಧಿ ಪ್ರಕಾಶನ, ಬೆಂಗಳೂರು, ೧೯೯೬

ಪುಟ್ಟಣ್ಣ ಎಂ.ಎಸ್., ಹಾಗಲವಾಡಿಯ ಪಾಳೆಯಗಾರರು, ಬೆಂಗಳೂರು, ೧೯೬೧

ಪುಟ್ಟಣ್ಣ ಎಂ.ಎಸ್, ಚಿತ್ರದುರ್ಗದ ಪಾಳೆಯಗಾರರು, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೯೬

ಭಾಸ್ಕರಪ್ಪ ಸಿ.ಎನ್.(ಸಂ), ತುಮಕೂರು ಜಿಲ್ಲಾದರ್ಶನ, ಟೈಮ್ಸ್ ಪಬ್ಲಿಕೇಷನ್ಸ್ , ತುಮಕೂರು, ೧೯೮೧

ಬಿಪನ್ ಚಂದ್ರ, ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್ , ಪೆಂಗ್ವಿನ್ ಬುಕ್ಸ್ , ನವದೆಹಲಿ, ೧೯೮೯

ಮಂಗಳವೇಡ ಶ್ರೀನಿವಾಸರಾವ್ ಮತ್ತು ಸಂಗಮ ನಾರಾಯಣ, ಕರ್ನಾಟಕ ಏಕೀಕರಣ, ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟ್, ಹುಬ್ಬಳ್ಳಿ, ೧೯೪೬

ಮಹದೇವ ಸಿ. ಮತ್ತು ಚಿನ್ನಸ್ವಾಮಿ ಸೊಸಲೆ (ಸಂ), ಹಂಪಿ : ಅಂದು-ಇಂದು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

ಮಾಲಿಮುದ್ದಣ್ಣ (ಸಂ), ಮಾಲಿಮರಿಯಪ್ಪ, ಸಾಹಿತ್ಯಾಲಯ, ಗಾಂಧಿನಗರ ತುಮಕೂರು, ೧೯೬೯

ಮುನೇಗೌಡ ಕೆ.ಎಸ್., ಡೆವಲಫ್‌ಮೆಂಟ್ ಆಫ್ ಕರ್ನಾಟಕ ಲೆಜಿಸ್ಲೇಚರ್, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ೧೯೮೮

ಮೋಹನ್‌ಕೃಷ್ಣ ರೈ ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

ರಾಜರಾಮ ಹೆಗಡೆ (ಸಂ), ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ, ಕನ್ನಡ ಸಾಹಿತ್ಯ ಅಕಾಡಮಿ, ಬೆಂಗಳೂರು, ೨೦೦೪

ರೈಸ್ ಬಿ.ಎಲ್., ಎಪಿಗ್ರಾಫಿಯಾ ಕರ್ನಾಟಕ, ಸಂಪುಟ ೧೨, ತುಮಕೂರು, ೧೯೦೪

ಲಕ್ಷ್ಮಣ್ ತೆಲಗಾವಿ, ಸ್ಥಳೀಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

ಲಕ್ಷ್ಮಣ ಸಿ.ಎಂ., ತುಮಕೂರು ಜಿಲ್ಲೆಯ ಭೌಗೋಳಿಕ ಲಕ್ಷಣಗಳು, ದರ್ಶನ ಪ್ರಕಾಶನ, ಬೆಂಗಳೂರು, ೨೦೦೦

ವಸು ಎಂ.ವಿ., ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ವೀರತಪ್ಪ ಕೆ., ರೀಡಿಂಗ್ಸ್ ಇನ್ ಮಾಡರ್ನ್ ಹಿಸ್ಟರಿ ಆಫ್ ಮೈಸೂರ್, ಎಸ್ .ಚಂದನ್ ಅಂಡ್ ಕಂಪನಿ ಲಿಮಿಟೆಡ್, ನ್ಯೂಡೆಲ್ಲಿ, ೧೯೭೫

ವೀರತಪ್ಪ ಕೆ., ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳುವಳಿ, ವಿಜಯ ರವಿ ಪ್ರಕಾಶನ, ಬೆಂಗಳೂರು, ೧೯೭೭

ಶಂಕರನಾರಾಯಣ ರಾವ್ ಎನ್.ಪಿ., ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು, ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೬

ಶರ್ಮ ಆರ್.ಎಸ್., ಪ್ರಾಚೀನ ಭಾರತ, (ಅನು) ಶಂಕರನಾರಾಯಣರಾವ್, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೭

ಶಿವತಾರಕ್ ಕೆ.ಬಿ., ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು : ಒಂದು ಸಾಂಸ್ಕೃತಿಕ ಅಧ್ಯಯನ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ೧೯೯೯

ಶಿವತಾರಕ್ ಕೆ.ಬಿ., ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

ಶ್ರೀನಿವಾಸ ಮೂರ್ತಿ ಎಚ್.ವಿ. ಮತ್ತು ರಾಮಕೃಷ್ಣ ಆರ್., ಸಮಗ್ರ ಕರ್ನಾಟಕ ಚರಿತ್ರೆ, ಓರಿಯೆಂಟ್ ಲಾಂಗ್‌ಮನ್ ಲಿಮಿಟೆಡ್, ಬೆಂಗಳೂರು, ೧೯೯೫

ಶ್ರೀನಿವಾಸಯ್ಯ ಎಚ್., ಎನ್.ಎಸ್.ಹರ್ಡಿಕರ್, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೨

ಷೇಕ್ ಅಲಿ ಬಿ., ಕರ್ನಾಟಕ ಚರಿತ್ರೆ, ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಸಿದ್ದವ್ವನಹಳ್ಳಿ ಕೃಷ್ಣಮೂರ್ತಿ (ಸಂ), ಗಾಂಧಿ ಮತ್ತು ಕರ್ನಾಟಕ, ಶ್ರೀರಾಮಚಂದ್ರ ವಡವಿ ಪ್ರಕಾಶನ, ಬೆಂಗಳೂರು, ೧೯೭೦

ಸುಂದರ ಅ., ಪ್ರಾಚ್ಯವಸ್ತು ಸಂಶೋಧನೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩

ಸುರೇಂದ್ರರಾವ್ ಬಿ.(ಸಂ), ಕರ್ನಾಟಕ ಚರಿತ್ರೆ ಸಂಪುಟ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಸಂಪುಟ-೨, ಗೀತಾಬುಕ್ ಹೌಸ್, ಮೈಸೂರು, ೧೯೭೭

ಸೂರ್ಯನಾಥ ಕಾಮತ್ (ಸಂ), ಕ್ವಿಟ್ ಇಂಡಿಯಾ ಮೂಮೆಂಟ್ ಇನ್ ಕರ್ನಾಟಕ, ಲಿಪಿ ಪ್ರಕಾಶನ, ಬೆಂಗಳೂರು, ೧೯೮೮

ಸೂರ್ಯನಾಥ ಕಾಮತ್ ಮತ್ತು ಕೃಷ್ಣಮೂರ್ತಿ ಪಿ.ವಿ.(ಸಂ), **ಕರ್ನಾಟಕ ಇತಿಹಾಸ ದರ್ಶನ**, ಸಂಪುಟ ೧೧, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೬

ಸೂರ್ಯನಾಥ ಕಾಮತ್ (ಸಂ), **ಇತಿಹಾಸ ದರ್ಶನ**, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೯೫

ಸೂರ್ಯನಾಥ ಕಾಮತ್(ಸಂ), **ವಿಜಯನಗರ ಸಾಮ್ರಾಜ್ಯ**, ಪ್ರಕಾಶ ಸಾಹಿತ್ಯ, ಬೆಂಗಳೂರು, ೧೯೮೫

ಯೋಗೀಶ್ ಡಿ.ಎಸ್.(ಸಂ), **ಜಯಮಂಗಲಿ ಸ್ಮರಣ ಸಂಚಿಕೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

ಯೋಗೀಶ್ವರಪ್ಪ ಡಿ.ಎನ್., **ಮರುಗೆರೆ ನಾಡಿನ ಹೊಯ್ಸಳ ವಿಷ್ಣುವರ್ಧನ**, "ಸಾಮಂತ ಗೂಳಿ ಬಾಚಿದೇವ" (ಲೇಖನ)

ಯೋಗೀಶ್ವರಪ್ಪ ಡಿ.ಎನ್. **ಹಾಗಲವಾಡಿ ನಾಯಕರು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

ವೆಂಕಟೇಶ ಜಿ.ಎಂ., **ಚರಿತ್ರೆ ಲೇಖನಶಾಸ್ತ್ರ : ಕೋಲಾರ ಪ್ರದೇಶದ ಅಧ್ಯಯನ**, ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಾದರಪಡಿಸಿದ ಎಂ.ಫಿಲ್.ನಿಬಂಧ, ೨೦೦೫

ಹಂಡ ಆರ್.ಎಲ್., **ಹಿಸ್ಟರಿ ಆಫ್ ಫ್ರೀಡಂ ಸ್ಟ್ರಗಲ್ ಇನ್ ಪ್ರಿನ್ಸ್ಲಿ ಸ್ಟೇಟ್ಸ್** , ನವದೆಹಲಿ ೧

**ಗೆಜೆಟಿಯರ್‌ಗಳು**

ಅಭಿಶಂಕರ ಕೆ., **ತುಮಕೂರು ಜಿಲ್ಲಾ ಗೆಜೆಟಿಯರ್**, ಸರ್ಕಾರಿ ಮುದ್ರಣ, ಬೆಂಗಳೂರು, ೧೯೬೯

ಅಭಿಶಂಕರ ಕೆ., **ಕೋಲಾರ ಜಿಲ್ಲಾ ಗೆಜೆಟಿಯರ್**, ಸರ್ಕಾರಿ ಮುದ್ರಣ, ಬೆಂಗಳೂರು, ೧೯೬೮

ರೈಸ್ ಬಿ.ಎಲ್., **ಮೈಸೂರು ಗೆಜೆಟಿಯರ್**, ಸಂಪುಟ.೨, ಏಷ್ಯಾನ್ ಏಜುಕೇಷನಲ್ ಸರ್ವೀಸ್, ನವದೆಹಲಿ, ಮದ್ರಾಸ್ ೨೦೦೧

ಸೂರ್ಯನಾಥ ಕಾಮತ್, **ಕರ್ನಾಟಕ ರಾಜ್ಯ ಗೆಜೆಟಿಯರ್**, ಭಾಗ ೧, ಪರಿಶ್ರೀ ಪಿಂಟರ್ಸ್, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೧೯೮೪,

**ಪತ್ರಿಕೆಗಳು**

**ಪೌರವಾಣಿ**, ೧೩-೧೦-೧೯೪೭, (ಕ.ಪ.೯)

**ವಾಗ್ಭೂಷಣ**, (ಕನ್ನಡ ಸಾಪ್ತಹಿಕ) ಧಾರವಾಡ, ೧೯೭೩

